# ವರನೊಂದಿಗೆ ಸಮಾಲೋಚನೆ







▪ ಎಸ್. ರಾಜಶೇಖರ್

# ವರನೊಂದಿಗೆ ಸಮಾಲೋಚನೆ

ಎಸ್. ರಾಜಶೇಖರ್

# ಮೊದಲ ಮಾತು

ಕುಟುಂಬ, ಸಮಾಜದ ಅತಿ ಮುಖ್ಯ ಘಟಕ. ಸ್ವಾಸ್ಥ್ಯ ಸಮಾಜಕ್ಕೆ ಆಧಾರ ಸೌಖ್ಯ ಕುಟುಂಬ. ಕುಟುಂಬದ ಸೌಖ್ಯಕ್ಕೆ, ಪತಿ ಪತ್ನಿ, ಇಬ್ಬರೂ ಹೊಣೆಗಾರರು.

ಗೃಹ ನಿರ್ವಹಣೆಯ ಹೊಣೆ ಪತ್ನಿಗೆ ಸೇರಿದ್ದು ; ಗೃಹಿಣಿ ಒಂದು ಗೃಹವನ್ನು ಕಟ್ಟಬಲ್ಲಳು ಅಥವಾ ಅದಕ್ಕೆ ಮಾರಕವಾಗಬಲ್ಲಳು ಎನ್ನುವ ಅಭಿಪ್ರಾಯ ಹೆಚ್ಚು ಬಳಕೆಯಲ್ಲಿದೆ. ಅಂತೆಯೆ ಪತ್ನಿಯ ಮೇಲೆ ಹೆಚ್ಚಿನ ಹೊಣೆಗಾರಿಕೆಯನ್ನು ಹೊರಿಸಲಾಗಿದೆ. ಆಕೆಯ ಜವಾಬ್ದಾರಿ, ಕರ್ತವ್ಯಗಳ ಬಗ್ಗೆ ನಿರಂತರ ಬೋಧನೆ ನಡೆದಿದೆ. ಹಾಗೂ ಈ ದಿಸೆಯಲ್ಲಿ ಸಾಕಷ್ಟು ಸಾಹಿತ್ಯವೂ ಸೃಷ್ಟಿಯಾಗಿದೆ.

ಆದರೆ, ಭಾರತದಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಪುರುಷ ಪ್ರಧಾನ ಕುಟುಂಬ ವ್ಯವಸ್ಥೆಯಲ್ಲಿ, ಪತಿಯ ಹೊಣೆಗಾರಿಕೆಯೂ ಅಷ್ಟೇ ಗುರುತರವಾದುದು ಎನ್ನುವುದನ್ನು ಮರೆಯಲಾಗದು. ಕುಟುಂಬದ ಭವಿಷ್ಯವನ್ನು ರೂಪಿಸುವಲ್ಲಿ ಪತಿಯ ಪಾತ್ರ ಅತಿ ಪ್ರಮುಖವಾದುದು. ಅಂತೆಯೆ, ಪತಿಯಾಗಿ ಹಾಗೂ ಪಿತನಾಗಿ ಒಬ್ಬ ಪುರುಷನ ಜವಾಬ್ದಾರಿ, ಕರ್ತವ್ಯಗಳನ್ನು ಮನೋ–ಸಾಮಾಜಿಕ ಹಿನ್ನೆಲೆಯಲ್ಲಿ ಚಿಂತನೆಗೊಳಗಾಗಿಸುವುದು ಇಲ್ಲಿನ ಉದ್ದೇಶ.

ಈ ಪುಸ್ತಕ ರಚನೆಯ ವೇಳೆ ಹಲವು ಸಲಹೆಗಳನ್ನಿತ್ತ ಸ್ನೇಹಿತರಿಗೆ ಮತ್ತು ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಗುರುರಾಜ ಪ್ರಿಂಟರ್ಸ್, ಇವರಿಗೆ ನನ್ನ ವಂದನೆಗಳು.

ಈ ಪುಸ್ತಕ ಪ್ರಕಟಣೆಗೆ ಪ್ರೇರಕಳೆನಿಸಿದ ಪತ್ನಿ ಶ್ರೀಮತಿ ಅನ್ನಪೂರ್ಣೆಗೆ (ಮಾಲ) ವಿಶೇಷವಾಗಿ ನನ್ನ ಕೃತಜ್ಞತೆಗಳು ಸಲ್ಲುತ್ತವೆ.

ನೂತನ ದಂಪತಿಗಳಿಗೆ ಶುಭವನ್ನು ಹಾರೈಸುತ್ತಾ, ವರನು ಒಮ್ಮೆ ಈ ಪುಸ್ತಕವನ್ನು ಪೂರ್ಣ ಓದಿ, ಮುಂದಿನ ತನ್ನ ಕರ್ತವ್ಯ ಮತ್ತು ಹೊಣೆಯ ಬಗೆಗೆ ಚಿಂತನೆಯಲ್ಲಿ ತೊಡಗಲಿ ಹಾಗೂ ಸ್ಪಷ್ಟ ಕಲ್ಪನೆಯನ್ನು ಪಡೆಯಲಿ ಎಂದು ಬಯಸುವ,

— ಎಸ್. ರಾಜಶೇಖರ್.

# ವಿಷಯ ಸೂಚಿ

# ಗೃಹಸ್ಥಾಶ್ರಮದ ಹೊಸ್ತಿಲಲ್ಲಿ

ಮದುವೆಯ ಮಂಟಪದಲ್ಲಿ ಎಲ್ಲರ ಗಮನದ ಕೇಂದ್ರವೆನಿಸುವ [illegible]ರು ವ್ಯಕ್ತಿಗಳಲ್ಲಿ ಒಬ್ಬನಾದ ವರ, ಗೃಹಸ್ಥಾಶ್ರಮದ ಹೊಸ್ತಿಲಲ್ಲಿ [illegible]ಂತಿರುವ ವ್ಯಕ್ತಿ. ಕೈ ಹಿಡಿಯಲಿರುವ ಕನ್ಯೆಯೊಡನೆ ತನ್ನ ರಸ ನಿಮಿಷಗಳು [illegible]ಗೂ ಸ್ವತಂತ್ರ ಹಕ್ಕಿಗಳಂತೆ ತಮ್ಮಿಬ್ಬರ ಜೀವನ ಮತ್ತು ಏಕಾಂತದ [illegible]ಧುರ ಕಲ್ಪನೆಗಳಂತಹ ನವಿರು ನವಿರಾದ ಭಾವನೆಗಳಲ್ಲಿ ತಲ್ಲೀನನಾಗಿ ಸುತ್ತಲಿನ ಸಮಸ್ಯೆಗಳನ್ನು ತಾತ್ಕಾಲಿಕವಾಗಿ ಮರೆತು ನಿಂತಿರುವ ಭಾವಜೀವಿ.

ಕೈ ಹಿಡಿದವಳೊಂದಿಗೆ ಮಧುರ ಜೀವನ, ಮುದ್ದಾದ ಮಕ್ಕಳು [illegible]ತ್ತ ಅಚ್ಚುಕಟ್ಟಾದ ಸಂಸಾರ; ಭಾವನೆಗಳು ಹಾಗೆಯೇ ಮುಂದು ವ[illegible]ಯುತ್ತವೆ. ವರನ ಆರ್ಥಿಕ ಸ್ಥಿತಿ ಮತ್ತು ಅಭಿರುಚಿಗೆ ತಕ್ಕಂತೆ ತನ್ನ ಸಂಸಾರ ಹೇಗಿರಬೇಕೆಂಬ ವಿಷಯದ ಬಗೆಗೆ ಕಲ್ಪನೆ ಮತ್ತು ಯೋಜನೆ ಗಳು ವ್ಯಕ್ತಿಯಿಂದ ವ್ಯಕ್ತಿಗೆ ಭಿನ್ನವಾಗಿರುತ್ತವೆ. ಆದರೆ ನೆಮ್ಮದಿಯ, ಬೆಚ್ಚನೆಯ, ಅಚ್ಚುಕಟ್ಟಾದ ಸಂಸಾರದ ಕಲ್ಪನೆ ಸಾಮಾನ್ಯವಾದುದು.

ಬೆಚ್ಚನ್ನ ಮನೆಯಾಗಿ । ವೆಚ್ಚಕ್ಕೆ ಹೊನ್ನಾಗಿ ।
ಇಚ್ಛೆಯನು ಅರಿವ ಸತಿಯಾಗಿ ಸ್ವರ್ಗಕ್ಕೆ ।
ಕಿಚ್ಚು ಹಚ್ಚೆಂದ ಸರ್ವಜ್ಞ ॥

ಇವು ಗೃಹಸ್ಥಾಶ್ರಮದ ಹೊಸ್ತಿಲಲ್ಲಿರುವ ವರನ, ಆತನ ವಯಸ್ಸಿಗೆ ಸಹಜವಾದ ಭಾವನೆಗಳು.

ಪಾಣಿಗ್ರಹಣ ಗೃಹಸ್ಥಾಶ್ರಮ ಪ್ರವೇಶವನ್ನು ಸೂಚಿಸುತ್ತದೆ. ವರ ಗೃಹಸ್ಥನೆನಿಸುತ್ತಾನೆ; ಒಬ್ಬ ಪತ್ನಿಗೆ ಪತಿಯೆನಿಸುತ್ತಾನೆ. ತನ್ನ ಹಾಗೂ ಮತ್ತೊಬ್ಬ ವ್ಯಕ್ತಿಯ ಭವಿಷ್ಯವನ್ನು ರೂಪಿಸಬೇಕಾದ ಪತಿಯ

ಜವಾಬ್ದಾರಿ ಗುರುತರವಾದುದು. ಒಂದೆರಡು ವರ್ಷಗಳಲ್ಲಿ ಸಾಮಾನ್ಯವಾಗಿ ತಂದೆಯೂ ಆಗುವ ಸಾಧ್ಯತೆಯಿಂದ ಮುಂದಿನ ಪೀಳಿಗೆಯನ್ನು ಸರಿಯಾಗಿ ಬೆಳೆಸಬೇಕಾದ ಹಾಗೂ ಒಂದು ಸಂಸಾರವನ್ನು ನಡೆಸಬೇಕಾದ ಹೊಣೆ ಪತಿಯ ಮೇಲಿರುತ್ತದೆ.

ಆದರೆ ಒಂದು ಸಂಸಾರವನ್ನು ನಡೆಸಬೇಕಾದ ಪತಿಯ ಅನೇಕ ಕರ್ತವ್ಯಗಳ ಬಗೆಗೆ ಗೃಹಸ್ಥಾಶ್ರಮವನ್ನು ಪ್ರವೇಶಿಸಲಿರುವ ಬಹುತೇಕ ಯುವಕರಿಗೆ ಕಲ್ಪನೆಯಿರುವುದಿಲ್ಲ. ವಿವಾಹದ ನಂತರವೂ ಸ್ವಲ್ಪ ಕಾಲದ ವರೆಗೆ ಕಲ್ಪನಾ ಲೋಕವಲ್ಲಿಯೆ ವಿಹರಿಸುತ್ತಿರುವ ಪತಿಗೆ ಇವುಗಳ ಬಗೆಗೆ ಚಿಂತನೆ ಮಾಡುವ ಅವಶ್ಯಕತೆ ಇದೆ ಎನಿಸುವುದಿಲ್ಲ.

ಮೊದಲಿಗೆ ಪತಿ–ಪತ್ನಿಯನ್ನು ಗಾಢವಾಗಿ ಬಂಧಿಸುವಂತಹ ಪ್ರಮುಖ ತಂತು ಪರಸ್ಪರ ದೈಹಿಕ ಆಕರ್ಷಣೆ. ಕ್ರಮೇಣ ಈ ಆಕರ್ಷಣೆ ತನ್ನ ಹೊಸತನವನ್ನು ಕಳೆದುಕೊಳ್ಳುವ ಸಾಧ್ಯತೆ, ಜೀವನದಲ್ಲಿ ಲೈಂಗಿಕ ತೃಪ್ತಿಯೊಂದೇ ಎಲ್ಲವೂ ಅಲ್ಲವೆನ್ನುವ ತಿಳಿವು ಮೂಡಲು ಕಾರಣವಾಗುತ್ತದೆ. ವಾಸ್ತವವಾಗಿ, ಲೈಂಗಿಕ ಅಂಶವೊಂದೇ ಕೊನೆಯುವರೆಗೂ ಸಂಸಾರವನ್ನು ಭದ್ರವಾಗಿರಿಸುವ ಶಕ್ತಿಯಾಗಲಾರದು. ಅಂತೆಯೆ ಲೈಂಗಿಕ ಅಂಶ ಸಾಮಾನ್ಯವೆನಿಸುವ ಹಂತದ ನಂತರ, ಭದ್ರವಾದ ಸಂಸಾರಕ್ಕೆ ಆಧಾರವಾಗ ಬಲ್ಲ ಇತರ ಅಂಶಗಳು ಆ ಸ್ಥಾನವನ್ನು ಆಕ್ರಮಿಸಬೇಕು. ಪರಸ್ಪರ ಅರ್ಥಮಾಡಿಕೊಳ್ಳುವಿಕೆ, ತನ್ನ ನಂಬಿದವರನ್ನು ನೆಮ್ಮದಿಯಾಗಿರಿಸಬೇಕೆಂಬ ಆಸೆ, ಮಕ್ಕಳ ಭವಿಷ್ಯದ ಬಗೆಗೆ ಯೋಜನೆ ಮತ್ತು ತೃಪ್ತಿಕರ ಸಂಸಾರ ವನ್ನು ನಡೆಸಬೇಕೆಂಬ ಬಯಕೆ, ಸಂಸಾರ ರಥವನ್ನು ಭದ್ರ ನೆಲೆಗಟ್ಟಿನ ಮೇಲೆ ಸರಾಗವಾಗಿ ನಡೆಸಿಕೊಂಡು ಹೋಗಬಲ್ಲವು. ಜೀವನ ಸಂಗಾತಿಗಳು, ಲೈಂಗಿಕ ತೃಪ್ತಿಯ ಜೊತೆಯಲ್ಲಿಯೇ, ಸಾಧ್ಯವಾದ ಮಟ್ಟಿಗೆ ಬೌದ್ಧಿಕ ಚಿಂತನೆಯಲ್ಲಿ ಪಾಲ್ಗೊಂಡು, ಸಾಮಾಜಿಕ ಚಟುವಟಿಕೆಗಳಲ್ಲಿ ಸಮಾನವಾಗಿ ಭಾಗವಹಿಸಿ, ಪರಸ್ಪರರ ಅನಿಸಿಕೆಗಳನ್ನು ಹಂಚಿಕೊಳ್ಳುವ ಹಾಗೂ ಅವು ಗಳಿಗೆ ಮನ್ನಣೆಯನ್ನು ಕೊಡುವ ಮೂಲಕ, ಸಂಸಾರ ಸದಾ ತನ್ನ ಹೊಸ

ತನವನ್ನು ಕಾಪಾಡಿಕೊಳ್ಳಲು ಹಾಗೂ ಸ್ಥಿರವಾಗಿ ನಿಲ್ಲಲು ಕಾರಣವಾಗ ಬಲ್ಲದು. ಆದ್ದರಿಂದ ವಿವಾಹದ ನಂತರ ವರ್ಷಗಳುರುಳಿದಂತೆ ತಮ್ಮ ತಮ್ಮ ಕರ್ತವ್ಯಗಳ ಬಗೆಗೆ ಜಾಗೃತರಾಗಿ, ಅರ್ಥಪೂರ್ಣ ನೆರವು, ತಿಳಿ ವಳಿಕೆಯ ಮೂಲಕ ಸಂಸಾರ ಸುಭದ್ರವಾಗಿರಲು ನೋಡಿಕೊಳ್ಳಬಹುದು.

ಒಂದು ಸಂಸಾರ ಎಲ್ಲ ಹಂತಗಳಲ್ಲಿಯೂ, ಕೊನೆಯುವರೆಗೂ ನೆಮ್ಮದಿಯ ಸಂಸಾರವೆನಿಸಿಕೊಳ್ಳಬೇಕಾದರೆ, ಪತಿ ಪತ್ನಿಯಲ್ಲಿ ಅನ್ಯೋನ್ಯತೆ ಹಾಗೂ ಹೊಂದಾಣಿಕೆಯ ಭಾವನೆ ಆಗತ್ಯ. ತನ್ನ ಇಚ್ಛೆಯರಿತು ನಡೆವ ಸತಿಯನ್ನೇ ನಿರೀಕ್ಷಿಸುವ ಪತಿ, ಆಕೆಯ ಇಚ್ಛೆಯನ್ನೂ ಅರಿಯುವ ಪ್ರಯತ್ನ ಮಾಡಿದಾಗ ಮಾತ್ರ ಹೊಂದಾಣಿಕೆ ಅರ್ಥಪೂರ್ಣವೆನಿಸುತ್ತದೆ; ಸಂಸಾರ ಸ್ವರ್ಗ ಸಮಾನವೆನಿಸುತ್ತದೆ. ಈ ದಿಸೆಯಲ್ಲಿ ಪತಿಯ ಪಾತ್ರ ಗುರುತರ ವಾದುದು.

ಅಂತೆಯೆ, ಗೃಹಸ್ಥಾಶ್ರಮವನ್ನು ಪ್ರವೇಶಿಸುತ್ತಿರುವ ವರನನ್ನು, ಪತಿಯಾಗಿ ತನ್ನ ಹಲವು ಕರ್ತವ್ಯಗಳ ಬಗೆಗೆ ಚಿಂತನೆಯಲ್ಲಿ ತೊಡಗಿಸು ವುದು ನಮ್ಮ ಉದ್ದೇಶ. ಪತಿ ಹಾಗೂ ಪಿತನಾಗಿ ಆತನು ನಿರ್ವಹಿಸ ಬೇಕಾದ ಹಲವು ಕರ್ತವ್ಯಗಳಿಗೆ ಸಂಬಂಧಪಟ್ಟಂತೆ, ಮುಂದಿನ ಪುಟಗಳಲ್ಲಿ ವ್ಯಕ್ತವಾಗುವ ಕೆಲವು ಸಲಹೆಗಳು, ಅಭಿಪ್ರಾಯಗಳು ಮತ್ತು ಅನುಭವ ಗಳನ್ನು ಕುರಿತು ಆಲೋಚಿಸಲು, ವರನಿಗೆ ಇದೊಂದು ಆಹ್ವಾನ.

# ಪತಿದೇವರು

ನಮ್ಮಲ್ಲಿ ವ್ಯಾಪಕವಾಗಿ ಕಂಡುಬರುವ ಕುಟುಂಬ ಪದ್ಧತಿ ಪಿತೃಪ್ರಧಾನವಾದುದು. ಅಂದರೆ ಪುರುಷನೇ ಪ್ರಧಾನ ವ್ಯಕ್ತಿ. ಕುಟುಂಬದ ಎಲ್ಲ ವ್ಯವಹಾರಗಳಲ್ಲಿ ಅವನ ತೀರ್ಮಾನಕ್ಕೇ ಹೆಚ್ಚಿನ ಬೆಲೆ ಮತ್ತು ಅದು ನಿರ್ಣಾಯಕ. ಮನೆಯ ಸ್ತ್ರೀಯರು ಅನೇಕ ವಿಷಯಗಳ ಇತ್ಯರ್ಥ ದಲ್ಲಿ ಪಾಲ್ಗೊಂಡರೂ ಅಥವಾ ಅವರ ಅಭಿಪ್ರಾಯಗಳನ್ನು ಪಡೆದರೂ ಸಹ ಅಂತಿಮವಾಗಿ ಪುರುಷರ ತೀರ್ಮಾನವೇ ಮೇಲುಗೈ ಆಗಿರುವುದನ್ನು ಗಮನಿಸಬಹುದು. ಇದು ನಮ್ಮ ಕುಟುಂಬ ಪದ್ಧತಿಯಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಪರಿಸ್ಥಿತಿ.

ಇತ್ತೀಚಿನ ದಿನಗಳಲ್ಲಿ ಹಲವಾರು ಕಾರಣಗಳಿಂದಾಗಿ ಸ್ತ್ರೀಯೂ ಸಮಾನ ಪಾತ್ರವಹಿಸುವ ಸನ್ನಿವೇಶಗಳು ಮತ್ತು ಆ ದಿಸೆಯಲ್ಲಿ ಪರಿವರ್ತ ನೆಯೂ ಕಂಡುಬರುತ್ತಿದೆ. ಆದರೆ ಈ ಪರಿವರ್ತನೆ ಇನ್ನೂ ವ್ಯಾಪಕ ವೆನಿಸಿಲ್ಲ. ಪರಿವರ್ತನೆಯನ್ನು ಹೊಂದುತ್ತಿರುವ ಹಾಗೂ ಸ್ತ್ರೀ ಸಮಾನತೆ ಯನ್ನು ಅನುಷ್ಠಾನಕ್ಕೆ ತರುತ್ತಿರುವ ಕುಟುಂಬಗಳಲ್ಲಿಯೂ ಸಹ ಪುರುಷ ಪ್ರಧಾನ ಚಿಹ್ನೆಗಳೇ ಕಾಣಬರುತ್ತವೆ.

ಇದೇ ಹಿನ್ನೆಲೆಯಲ್ಲಿ ಸ್ತ್ರೀಯು ತನ್ನ ಎಲ್ಲಾ ವಯಸ್ಸಿನಲ್ಲೂ ಪುರುಷನನ್ನು ಆಶ್ರಯಿಸಿಕೊಂಡೇ ಬದುಕಬೇಕೆಂಬ ತತ್ವ ಕಾರ್ಯಾ ಚರಣೆಯಲ್ಲಿರುವುದನ್ನು ಗಮನಿಸಬಹುದು. ಪತ್ನಿ ತನ್ನ ಪತಿಯ ದಾಸಿ, ಆತನ ಎಲ್ಲಾ ಅವಶ್ಯಕತೆಗಳನ್ನೂ ಪೂರೈಸಬೇಕಾದ ವ್ಯಕ್ತಿ, ಆತನ ಛಾಯಾವರ್ತಿನಿ ಎನ್ನುವ ಅಭಿಪ್ರಾಯವನ್ನು ಪ್ರತಿ ಸ್ತ್ರೀಗೂ ಚಿಕ್ಕಂದಿನಿಂ ದಲೇ ಬೋಧಿಸುವುದು ಹಾಗು ಈ ಭಾವನೆಯನ್ನು ಎಲ್ಲಾ ಸ್ತ್ರೀಯರೂ

ಅಂತರ್ಗತ ಮಾಡಿಕೊಳ್ಳುವುದು ವ್ಯಾಪಕವಾಗಿ ಕಂಡುಬರುತ್ತದೆ. ಅಂತೆಯೆ 'ಪತಿ' ಯ ಕಲ್ಪನೆಯೇ ಭವ್ಯವಾದುದು, ದೈವ ಸಮಾನವಾದುದು. ಪತಿಯನ್ನು ದೇವರ ಸಮಾನವೆಂದು ಪರಿಗಣಿಸುವ ಪ್ರಯತ್ನ, ಪತಿಯನ್ನು ದೇವರನ್ನಾಗಿಯೇ ಮಾರ್ಪಡಿಸಿದೆ. ಅಂತೆಯೆ ಆತ 'ಪತಿದೇವರು' ಎನಿಸಿಕೊಂಡಿದ್ದಾನೆ.

ಪತಿ, ದೇವರಂತೆಯೆ ವರ್ತಿಸಲು ಪ್ರಾರಂಭಿಸಿರುವುದು ವಿಚಾರಾರ್ಹ ದೇವಸ್ಥಾನಗಳ ದೇವರಂತೆ ಸೇವೆಯನ್ನು ನಿರೀಕ್ಷಿಸಿ, ಭಕ್ತರ ಕಷ್ಟಗಳನ್ನು ವಿಚಾರಿಸದ ಪರಿಸ್ಥಿತಿಯನ್ನು ಬೆಳೆಸಿಕೊಳ್ಳುವ ಪ್ರವೃತ್ತಿ ಹಲವೆಡೆ ಕಂಡು ಬರುತ್ತದೆ. ಹೊರಗಡೆ ದುಡಿದು ತರುವಂತಹ ಕಾರ್ಯವೊಂದನ್ನು ಬಿಟ್ಟರೆ ಇತರೆ ಯಾವುದೇ ಕಾರ್ಯ ತನ್ನದಲ್ಲ ಎನ್ನುವ ಭಾವನೆ, ತಾನು ಗಂಡಸು ಶ್ರೇಷ್ಠ, ಪತಿಯ ಎಲ್ಲ ಅವಶ್ಯಕತೆಗಳನ್ನು ಪೂರೈಸಬೇಕಾದ, ಸೇವೆಗಾಗಿಯೆ ಇರುವ ವ್ಯಕ್ತಿ ಪತ್ನಿ, ಇತ್ಯಾದಿ ಭಾವನೆಗಳು ಹಲವರಲ್ಲಿ ಬೇರೂರಿರುವುದೂ ಕಂಡುಬರುತ್ತದೆ. ಈ ಭಾವನೆಯ ಅತಿರೇಕಗಳು, ಪತ್ನಿಯ ಮೇಲೆ ಸಾರ್ವಭೌಮತ್ವವನ್ನು ಸ್ಥಾಪಿಸುವ, ಪತ್ನಿಯು ಸ್ವೇಚ್ಛಾರೀತಿ ಬಳಸಬಹು ದಾದ ಸ್ವತ್ತು, ಬೇಕೆನಿಸಿದರೆ ಅತಿ ನಿಕೃಷ್ಟವಾಗಿ ನಡೆಸಿಕೊಳ್ಳಬಹುದಾದ ಹಾಗೂ ಹೆಂಡತಿಯನ್ನು ಥಳಿಸಲೂಬಹುದಾದ ಹಕ್ಕುಗಳು ಪತಿಗೆ ಇವೆ ಎಂಬ ಭಾವನೆ ಮತ್ತು ವರ್ತನೆಗಳಿಗೆ ಎಡೆಮಾಡಿಕೊಡುತ್ತಿವೆ. ಇಂತಹ ಪರಿಸ್ಥಿತಿ, ಸಾಂಸ್ಕೃತಿಕವಾಗಿ ಹಿಂದುಳಿದಂತಹ ಜನರಲ್ಲಿ ಹೆಚ್ಚು ಕಂಡುಬರು ತ್ತದೆ ಎಂದು ಒಪ್ಪಿಕೊಂಡರೂ ಸಹ, ನಾಗರಿಕ ಎನಿಸುವ ಸಮಾಜದಲ್ಲೂ ಪತಿ ದೈವಪೀಠವನ್ನು ಏರಿ ಪತ್ನಿಯಿಂದ ಸೇವೆಯನ್ನು ನಿರೀಕ್ಷಿಸುವ, ಏಕ ಪಕ್ಷೀಯ ಅಧಿಕಾರ ಧೋರಣೆ ವ್ಯಾಪಕವಾಗಿರುವುದೂ ಸ್ಪಷ್ಟ.

ಆದರೆ, ತನ್ನ ಪತ್ನಿಗೆ ತಾನು ದೈವ ಸಮಾನವೆಂದು ಭಾವಿಸಿ ವರ್ತಿಸುವ ಬದಲು, ಮಾನವ ಸಹಜ ವರ್ತನೆ ಅತಿ ಮುಖ್ಯ. "ಧರ್ಮೇಚ, ಅರ್ಥೇಚ, ಕಾಮೇಚ .......... " ಎಂದು ಅಗ್ನಿ ಸಾಕ್ಷಿಯಾಗಿ ಕೈಹಿಡಿದ ಧರ್ಮಪತ್ನಿಗೆ ಮಂತ್ರಗಳ ಆಶ್ವಾಸನೆಗೂ ಹೆಚ್ಚಿನದಾಗಿ ದಿನನಿತ್ಯದ ನಡವಳಿಕೆಯಲ್ಲಿ ಆಕೆಗೆ ಸಹಕಾರ ಮತ್ತು ನೆಮ್ಮದಿಯನ್ನು ತಂದು

ಕೊಡಬೇಡವೆ ? ತನ್ನೆಲ್ಲ ಕಷ್ಟ ಸುಖಗಳಲ್ಲಿ ಪತ್ನಿ ಭಾಗಿಯಾಗಬೇಕೆಂದು ನಿರೀಕ್ಷಿಸುವ ಪತಿ, ಪತ್ನಿಯ ಕಷ್ಟಸುಖಗಳಲ್ಲಿಯೂ ಭಾಗಿಯಾಗಬೇಡವೆ ? ಬಾಳಸಂಗಾತಿ ಎಂದು ಕರೆಯುವ ಆಕೆಯನ್ನು ಬಾಳಿನ ಎಲ್ಲ ಹಂತಗಳಲ್ಲಿಯೂ, ಎಲ್ಲ ವಿಷಯಗಳಲ್ಲಿಯೂ ಸಮಾನಳಂತೆ ನಡೆಸಿಕೊಳ್ಳುವುದು ಮತ್ತು ಸಮಾನ ಸ್ವಾತಂತ್ರ್ಯವನ್ನು ಕೊಡುವುದು ಸೂಕ್ತವಲ್ಲವೆ ?

ಒಂದು ಸಂಸಾರದ ನೆಮ್ಮದಿ ಮತ್ತು ಅಭಿವೃದ್ಧಿ ಬಹಳ ಮಟ್ಟಿಗೆ ಕುಟುಂಬದ ಪುರುಷನನ್ನೇ ಅವಲಂಬಿಸಿರುತ್ತದೆ. 'ನಮ್ಮ ಭವಿಷ್ಯವನ್ನು ರೂಪಿಸುವವರು ನಾವೇ' ಎನ್ನುವ ಮಾತು ಪುರುಷರಿಗೆ ಸ್ವಲ್ಪ ಅನ್ವಯವಾಗುವುದಾದರೂ ಸಹ, ಭಾರತದ ಸಧ್ಯದ ಸಾಮಾಜಿಕ ಸ್ಥಿತಿಯಲ್ಲಿ ವ್ಯಾಪಕವಾಗಿ ಮಹಿಳೆಯರಿಗೆ ಅನ್ವಯಿಸಲಾಗುವುದಿಲ್ಲ. ಆರ್ಥಿಕವಾಗಿ ಸ್ವತಂತ್ರವಾಗಿರಲು ಪ್ರಯತ್ನಿಸುತ್ತಿರುವ ಅತ್ಯಂತ ಕಡಿಮೆ ಪ್ರಮಾಣದ ಕೆಲವೇ ಮಹಿಳೆಯರನ್ನು ಬಿಟ್ಟರೆ, ಅತ್ಯಧಿಕ ಸಂಖ್ಯೆಯ ಮಹಿಳೆಯರು ಆರ್ಥಿಕ ಸ್ವಾತಂತ್ರ್ಯವನ್ನು ಹೊಂದಿರದೆ, ವಿವಾಹವಾಗಿ ಜೀವನ ನಡೆಸುವವರೇ ಆಗಿದ್ದಾರೆ. ಅಶಿಕ್ಷಿತರ ಸಂಖ್ಯೆಯೂ ಮಹಿಳೆಯರಲ್ಲಿ ಹೆಚ್ಚು. ವಿವಾಹವಾಗುವ ಅಸಂಖ್ಯ ಮಹಿಳೆಯರ ಭವಿಷ್ಯ ಅಸ್ಪಷ್ಟ. ಏಕೆಂದರೆ ಎಲ್ಲರ ವೈವಾಹಿಕ ಜೀವನವೂ ನೆಮ್ಮದಿಯಿಂದ ಕೂಡಿರುತ್ತದೆ ಎಂದು ಹೇಳಲಾಗದು. ವಿವಾಹಿತ ಮಹಿಳೆಯರ ಉತ್ತಮ ಭವಿಷ್ಯ ಅವರ ಪತಿಯನ್ನು ಅವಲಂಬಿಸಿರುತ್ತದೆ ಎಂದರೆ ತಪ್ಪಾಗಲಾರದು. ಅಂದರೆ, ಪತಿಯ ಹಣದ ಸಂಪಾದನೆ ಅಥವಾ ಆರ್ಥಿಕ ಹಿನ್ನೆಲೆಗೂ ಹೆಚ್ಚಿನದಾಗಿ, ಆ ವ್ಯಕ್ತಿಯ ಮನೋ-ಸಾಮಾಜಿಕ ಹಿನ್ನೆಲೆಯನ್ನು ಅವಲಂಬಿಸಿರುತ್ತದೆ. ಎಷ್ಟು ಹಣವನ್ನು ಪತಿ ಸಂಪಾದಿಸುತ್ತಾನೆ ಎನ್ನುವುದು ಅಷ್ಟು ಮುಖ್ಯವಲ್ಲ ; ಪ್ರತಿಯಾಗಿ ಪತಿ ತನ್ನ ಪತ್ನಿಯನ್ನು ಮತ್ತು ಅವಳ ಅನಿಸಿಕೆ, ಅವಶ್ಯಕತೆಗಳನ್ನು ಎಷ್ಟರ ಮಟ್ಟಿಗೆ ಅರ್ಥಮಾಡಿಕೊಳ್ಳಬಲ್ಲ ಹಾಗೂ ಸೂಕ್ತ ರೀತಿಯಲ್ಲಿ ನಡೆಸಿಕೊಳ್ಳಬಲ್ಲ ಎನ್ನುವುದು ಮುಖ್ಯ. ಅಂತಹ ಪತಿಯನ್ನು ಹೊಂದುವುದು ಹಲವು ಪತ್ನಿಯರ ಅದೃಷ್ಟ ಎನ್ನಬಹುದೇನೋ !

ಪತ್ನಿ ಮತ್ತು ಒಟ್ಟು ಸಂಸಾರವನ್ನು ಸೌಖ್ಯವಾಗಿಡುವಲ್ಲಿ ಪತಿಯ

ಪಾತ್ರ ಎಷ್ಟು ಮುಖ್ಯ ಎನ್ನುವುದು ಬಹಳ ಸ್ಪಷ್ಟ. ಪತಿಪ್ರಧಾನವಾದ ನಮ್ಮ ಕುಟುಂಬ ಪದ್ಧತಿಯಲ್ಲಿ ಆತನ ಪಾತ್ರ ಬಹಳ ಮುಖ್ಯವಾದುದು. ಅಂತೆಯೆ ಪತಿ ಕೇವಲ ಮಾನವನಾಗಿ, ತನ್ನ ಸಂಗಾತಿಗೆ ತನ್ನಿಂದ ಸಿಗಬೇಕಾದ ತಿಳಿವು, ನೆರವು ಮತ್ತು ತನ್ನ ಕರ್ತವ್ಯಗಳ ಬಗೆಗೆ ಚಿಂತಿಸಿ ಅದರಂತೆ ವರ್ತಿಸಿದಲ್ಲಿ ಅಸಂಖ್ಯ ಕುಟುಂಬಗಳು ಸೌಖ್ಯವಾಗಿರಲು ಸಾಕು.

ಮಕ್ಕಳನ್ನು ಹೆರುವುದು ಹೆಂಗಸರ ಕೆಲಸವಿದ್ದಂತೆಯೆ, ಮಕ್ಕಳ ಪೂರ್ಣ ಪೋಷಣೆಯ ಜವಾಬ್ದಾರಿಯೂ ಹೆಂಗಸರದೇ ಆಗಿರುತ್ತದೆ ಎನ್ನುವ ಅಭಿಪ್ರಾಯ ಕೂಡ ವ್ಯಾಪಕವಾಗಿ ಕಂಡುಬರುತ್ತದೆ. ಚಿಕ್ಕಮಕ್ಕಳ ಪೋಷಣೆಗೂ ತಮಗೂ ಯಾವುದೇ ಸಂಬಂಧವಿಲ್ಲ ಎಂದು ಭಾವಿಸುವ ಪುರುಷರು, ಮಕ್ಕಳ ತಂದೆಯಾಗಿ ಪೂರ್ಣ ಹೊಣೆಯನ್ನು ನಿರ್ವಹಿಸಿದಂತಾಗುವುದಿಲ್ಲ. ಮಕ್ಕಳ ಪೋಷಣೆಯಲ್ಲಿ ಪತಿ ಪಾಲ್ಗೊಳ್ಳುವ ಪರಿಣಾಮವಾಗಿ ಪತ್ನಿಗೆ ನೆರವನ್ನು ಒದಗಿಸುವುದಕ್ಕೂ ಹೆಚ್ಚಿನದಾಗಿ, ಮಕ್ಕಳ ಮಾನಸಿಕ ಬೆಳವಣಿಗೆಯ ದೃಷ್ಟಿಯಿಂದಲೂ ಅವಶ್ಯಕ. ಒಂದು ಮಗುವಿನ ವ್ಯಕ್ತಿತ್ವದ ಪೂರ್ಣ ವಿಕಾಸಕ್ಕೆ, ತಾಯಿಯ ಪೋಷಣೆಯ ನೀರೆರೆಯುವಿಕೆಯಷ್ಟೆ, ತಂದೆಯ ಚೇತನದ ಬಿಸಿಲೂ ಬೀಳಬೇಕು. ಪತಿಯಾದಂತಹ ವ್ಯಕ್ತಿ, ಸಾಧಾರಣವಾಗಿ ಒಂದು ಅಥವಾ ಎರಡು ವರ್ಷಗಳೊಳಗೆ ಪಿತನೂ ಆಗುವ ಸಾಧ್ಯತೆ ಹೆಚ್ಚು. ಅಂತೆಯೆ ಪತಿ–ಪಿತ, ಎರಡೂ ಪಾತ್ರಗಳನ್ನು ಏಕ ಕಾಲದಲ್ಲಿ ನಿರ್ವಹಿಸಬೇಕಾಗುತ್ತದೆ.

ಕುಟುಂಬದ ಕಲ್ಯಾಣಕ್ಕೆ ಸಂಬಂಧಪಟ್ಟಂತೆ ಸ್ತ್ರೀಪುರುಷರಲ್ಲಿ ಯಾರು ಮೇಲು ಯಾರು ಕೀಳು ಎನ್ನುವುದರಲ್ಲಿ ಅರ್ಥವಿಲ್ಲ. ಸ್ತ್ರೀಯರ ಸ್ವಾತಂತ್ರ್ಯ, ಉದ್ಯೋಗ ಮತ್ತು ಸಮಾನತೆಯ ಬಗೆಗೆ ಮನೆಯ ಹೊರಗಡೆ ವಾದಿಸುವ ಮತ್ತು ಪ್ರಶ್ನಿಸುವ ಪುರುಷ, ತನ್ನ ಪತ್ನಿ ಅಥವಾ ಮಗಳ ವಿಷಯದಲ್ಲಿ ಇವೆಲ್ಲವನ್ನೂ ಅಪೇಕ್ಷಿಸುತ್ತಾನೆ. ಅದೇ ರೀತಿ ಸ್ತ್ರೀ, ಪುರುಷರಿಗೆ ಯಾವ ವಿಧದಲ್ಲಿಯೂ ಕಡಿಮೆಯಲ್ಲ, ಎಲ್ಲ ವಿಧದಲ್ಲಿಯೂ ಸಮಾನಳು ಎಂದು ಹೊರಗಡೆ ವಾದಿಸುವ ಮಹಿಳೆ, ಮನೆಗೆ ಬಂದಾಗ ತನ್ನ ಪತಿ ಮತ್ತು ಮಕ್ಕಳ ಸೌಖ್ಯಕ್ಕೋಸ್ಕರ ಸ್ವತಃ ಎಲ್ಲ ಕೆಲಸಗಳನ್ನೂ

ಮಾಡಲು ಸಿದ್ಧಳಿರುತ್ತಾಳೆ. ಅಂದರೆ ಸ್ತ್ರೀಪುರುಷರ ನಡುವಿನ ಶ್ರೇಷ್ಠ ಅಥವಾ ಸಮಾನತೆಯು ವಾದ-ವಿವಾದ ಮನೆಯ ಹೊರಗಿನ, ಸಾರ್ವಜನಿಕ ಸ್ಥಳಗಳ ಚರ್ಚೆಗೆ ಸೀಮಿತವಾದಂತಹುದು. ಮನೆಗೆ ಬಂದೊಡನೆ, ಪ್ರತಿ ಸ್ತ್ರೀ ಅಥವಾ ಪ್ರತಿ ಪುರುಷನೂ. ತನ್ನ ಪತಿ, ತನ್ನ ಮಕ್ಕಳು ಅಥವಾ ತನ್ನ ಪತ್ನಿ, ತನ್ನ ಮಕ್ಕಳು ಎಂದು ಯೋಚಿಸುವುದು ಸ್ವಾಭಾವಿಕ. ತನ್ನ ಕುಟುಂಬದ ಒಟ್ಟು ಸೌಖ್ಯ, ಪತಿ ಅಥವಾ ಪತ್ನಿಯ ಗುರಿಯಾಗುತ್ತದೆ. ಅಂತೆಯೆ, 'ಪತಿದೇವರು' ಮನೆಯ ಹೊರಗಿನ ಎಲ್ಲ ತಾರತಮ್ಯ ಭಾವನೆ ಯನ್ನು ತ್ಯಜಿಸಿ, ಒಬ್ಬ ಪತಿಯಾಗಿ ತನ್ನ ಕುಟುಂಬದ ಕಲ್ಯಾಣಕ್ಕೆ ಹೇಗೆ ನೆರವಾಗಬಲ್ಲ, ಕರ್ತವ್ಯಗಳೇನು ಎನ್ನುವುದರ ಬಗೆಗೆ ಚಿಂತನೆ ಆವಶ್ಯಕ.

ಪತಿದೇವರೆನಿಸಿಕೊಳ್ಳುವ ಬದಲು, ಕೇವಲ ಪತಿಯಾಗಿ ನಿರ್ವಹಿಸ ಬೇಕಾದ ಅನೇಕ ಕರ್ತವ್ಯಗಳು ಹಾಗೂ ತಂದೆಯಾಗಿ ಮಕ್ಕಳಿಗೆ ಸಂಬಂಧ ಪಟ್ಟಂತೆ ನಿರ್ವಹಿಸಬೇಕಾದ ಅನೇಕ ಕರ್ತವ್ಯಗಳ ನಿರ್ವಹಣೆಯಲ್ಲಿ, ಹಲವು ಲೋಪಗಳು ಕಂಡುಬರುತ್ತವೆ. ಅದಕ್ಕೆ ಕಾರಣಗಳು ಹಲವಾರು. ಹಿಂದಿನಿಂದ ಲೂ ನಡೆದುಬಂದ ಪದ್ಧತಿಯ ಬಗ್ಗೆ ಸ್ವಲ್ಪವೂ ಚಿಂತಿಸದೆ ಅನುಸರಿಸುವುದು, ಪುರುಷನ ಸ್ಥಾನವೇ ಬೇರೆ ಆದ್ದರಿಂದ ಶ್ರಮ ವಿಭಜನೆ ಮತ್ತು ಪತಿ ಪತ್ನಿಯ ನಡುವೆ ಅಂತರ ಅತ್ಯಂತ ಆವಶ್ಯಕ ಎನ್ನುವ ಧೋರಣೆ ಹಲವು ಸಂದರ್ಭ ಗಳಲ್ಲಿ ಕಾರಣವೆನಿಸುತ್ತವೆ. ಆದರೆ ಇತರ ಕೆಲವು ಸಂದರ್ಭಗಳಲ್ಲಿ, ಪುರುಷ ಶ್ರೇಷ್ಠ ಅಥವಾ ಹಿಂದಿನಿಂದ ಬಂದಂತಹ ಪದ್ಧತಿ ಶ್ರೇಷ್ಠ ಎಂದಾಗಲೀ ತಿಳಿಯದಿದ್ದರೂ, ಈ ದಿಸೆಯಲ್ಲಿ ಸೂಕ್ತ ತಿಳಿವಳಿಕೆಯ ಅಭಾವದಿಂದ, 'ಪತಿ-ಪಿತ' ನಾಗಿ ಕರ್ತವ್ಯ ನಿರ್ವಹಣೆಯಲ್ಲಿ ಲೋಪಗಳು ಕಂಡುಬರುತ್ತಿರ ಬಹುದು. ಈ ದಿಸೆಯಲ್ಲಿ ಮುಕ್ತ ಮನಸ್ಸಿನಿಂದ ಚರ್ಚಿಸುವ ಮೂಲಕ ಪತಿ ತನ್ನ ಕರ್ತವ್ಯಗಳ ಬಗೆಗೆ ಚಿಂತನೆಯಲ್ಲಿ ತೊಡುಗುವಂತೆ ಪ್ರಚೋದಿಸು ವುದೆ ಇಲ್ಲಿನ ಉದ್ದೇಶ.

# ಮಾನಸಿಕ ಹೊಂದಾಣಿಕೆ

ಸುಖ ಸಂಸಾರಕ್ಕೆ, ನೆಮ್ಮದಿಯ ಜೀವನಕ್ಕೆ, ಮಾನಸಿಕ ಹೊಂದಾಣಿಕೆ ಅತ್ಯಂತ ಆವಶ್ಯಕ. ಪತಿ ಪತ್ನಿ ಪರಸ್ಪರರನ್ನು ಅರಿತು, ಹೊಂದಿಕೊಂಡು ಬಾಳುವುದು ಸುಖ ಜೀವನಕ್ಕೆ ಬುನಾದಿ ಇದ್ದಂತೆ. ಹೊಂದಾಣಿಕೆ ಹೆಚ್ಚಿದಂತೆ ಜೀವನ ಅರ್ಥಪೂರ್ಣವೆನಿಸುತ್ತದೆ, ಸಂಸಾರ ಆನಂದಮಯುವೆನಿಸುತ್ತದೆ; ಮತ್ತೊಬ್ಬರ ಹಿತಕ್ಕೋಸ್ಕರ ಸ್ವಂತ ಸುಖವನ್ನು ತ್ಯಾಗಮಾಡಲೂ ಅದು ಸಿದ್ಧಗೊಳಿಸುತ್ತದೆ.

ಪ್ರತಿ ಪತ್ನಿಯೂ ತನ್ನ ಪತಿಯ ಛಾಯಾವರ್ತಿನಿಯಾಗಿರಬೇಕು, ಆತನ ಬೇಕು-ಬೇಡಗಳನ್ನು ಅರ್ಥಮಾಡಿಕೊಂಡು, ಹೊಂದಿಕೆಯ ಜೀವನವನ್ನು ನಡೆಸಬೇಕೆಂದು ಬೋಧನೆ ನಡೆದೇ ಇದೆ. ಸಾಧಾರಣವಾಗಿ ಪತ್ನಿಯ ಕಡೆಯಿಂದ ಈ ದಿಸೆಯಲ್ಲಿ ಸಾಕಷ್ಟು ಹೊಂದಾಣಿಕೆಯೂ ಕಂಡುಬರುತ್ತದೆ. ಆದರೆ ಇದೇ ಧಾಟಿಯಲ್ಲಿ ಪುರುಷನಿಗೆ ಬೋಧನೆಯಾಗಲಿ, ಅಂತೆಯೇ ಹೊಂದಾಣಿಕೆಯ ಪ್ರಯತ್ನವಾಗಲೀ ಸಮರ್ಪಕವಾಗಿದೆಯೆಂದು ಹೇಳಲಾಗದು. ಪತಿಯಾದವನು ತನ್ನ ಪತ್ನಿಯ ಭಾವನೆಗಳಿಗೆ ಗಮನಕೊಡುವುದಿರಲಿ ತನ್ನ ಅತಿರೇಕಗಳೊಡನೆಯೂ ಪತ್ನಿಯ ಹೊಂದಾಣಿಕೆಯನ್ನು ನಿರೀಕ್ಷಿಸಿ, ಆಗಾಗ ಸಿಡಿದೇಳುವ ಸಂದರ್ಭಗಳು ಸಾಕಷ್ಟು ಕಂಡುಬರುತ್ತವೆ. ಹೊಂದಾಣಿಕೆ ಪರಸ್ಪರವಿರಬೇಕಾದ ಸ್ಥಳದಲ್ಲಿ, ಹೆಚ್ಚಿನ ಸಂದರ್ಭಗಳಲ್ಲಿ ಏಕಮುಖವಾಗಿರುವುದು ಕಂಡುಬರುತ್ತದೆ. ಅಂತೆಯೆ, ಮೊದಲಿಸುವುದರಿಂದ ಪ್ರಾರಂಭವಾಗಿ ಪತ್ನಿಯನ್ನು ಥಳಿಸುವವರೆಗೆ ಅನೇಕ ಪ್ರಸಂಗಗಳು ಬೆಳೆದಿರುವುದು ಕಂಡುಬರುತ್ತದೆ.

ಸಾಧಾರಣವಾಗಿ ಹೆಚ್ಚಿನ ಕುಟುಂಬಗಳಲ್ಲಿ ಪತಿಯ ಇಚ್ಛೆಗೆ ಅನುಸಾರವಾಗಿ ಪತ್ನಿ ನಡೆದುಕೊಳ್ಳುವುದು ಹಾಗೂ ಕುಟುಂಬದ ಎಲ್ಲ ವ್ಯವಹಾರಗಳೂ ಅವನಿಷ್ಟದಂತೆಯೇ ಜರುಗುತ್ತಿರುವುದು ವಾಡಿಕೆ. ಈ

ಎಲ್ಲ ಸಂದರ್ಭಗಳಲ್ಲಿ ಪತ್ನಿಯಿಂದ ಸಹಕಾರ ಹಾಗೂ ಹೊಂದಾಣಿಕೆ ಅಷ್ಟೇ ವ್ಯಾಪಕವಾಗಿ ಕಂಡುಬರುತ್ತದೆ. ಆದರೂ ಅತಿರೇಕ, ಅಧಿಕಾರ, ಅಸಹನೆಗಳನ್ನೂ ಪತಿ ಪ್ರದರ್ಶಿಸುವುದು ಅನೇಕ ಪ್ರಸಂಗಳಲ್ಲಿ ಕಂಡುಬರುತ್ತದೆ. ಇದೇ ಕಾರಣದಿಂದ, ಮಾನಸಿಕ ಹೊಂದಾಣಿಕೆಯ ಜವಾಬ್ದಾರಿ ಬಹಳ ಮಟ್ಟಿಗೆ ನಮ್ಮ ಕುಟುಂಬ ವ್ಯವಸ್ಥೆಯಲ್ಲಿ ಪುರುಷನ ಮೇಲೆಯೇ ಇದೆ ಎಂದರೆ ತಪ್ಪಾಗಲಾರದು.

## ಭಿನ್ನ ದೃಷ್ಟಿಕೋನ

ಪತಿ ಮತ್ತು ಪತ್ನಿಯ ಮಧ್ಯೆ ಮನಸ್ತಾಪ ಆಗಾಗ್ಗೆ ಸಂಭವಿಸಲು ಕಾರಣವೆನಿಸುವ ಹಲವು ಅಂಶಗಳಲ್ಲಿ ಪ್ರಮುಖವಾದುದು, ಜೀವನದ ಬಗೆಗೆ ಇರುವ ದೃಷ್ಟಿಕೋನದಲ್ಲಿನ ಭಿನ್ನತೆ. ಒಬ್ಬ ವ್ಯಕ್ತಿಯ ಅಭಿಪ್ರಾಯ, ಅಭಿರುಚಿ ಮತ್ತು ದೃಷ್ಟಿಕೋನದಲ್ಲಿನ ವ್ಯತ್ಯಾಸಕ್ಕೆ ಶಿಕ್ಷಣ, ಬೆಳೆದಂತಹ ವಾತಾವರಣ ಹಾಗೂ ವೈಯಕ್ತಿಕವೆನಿಸುವಂತಹ ಹಲವು ಅಂಶಗಳು ಕಾರಣವೆನಿಸಬಹುದು. ಅಂತೆಯೆ, ಪತಿ ಪತ್ನಿಯ ನಡುವೆ ತೀವ್ರತರ ಭಿನ್ನತೆ ಇದ್ದ ಪಕ್ಷದಲ್ಲಿ, ಅನೇಕ ಸಂದರ್ಭಗಳಲ್ಲಿ ಅದು ಮನಸ್ತಾಪ, ಕಲಹಗಳಿಗೆ ಆಸ್ಪದವೆನಿಸಬಹುದು.

ಪತಿ ಮತ್ತು ಪತ್ನಿಯಲ್ಲಿ ಒಬ್ಬರು ಸಂಪ್ರದಾಯ ರೀತಿಯ ಭಾವನೆ ಮತ್ತು ನಡವಳಿಕೆಯನ್ನು ಹೊಂದಿರಬಹುದು. ಈ ವ್ಯತ್ಯಾಸ ಅನೇಕ ಸಂದರ್ಭಗಳಲ್ಲಿ ಸಣ್ಣಪುಟ್ಟ ಪ್ರಮಾಣದ ಮನಸ್ತಾಪಕ್ಕೆ ಆಗಾಗ್ಗೆ ಪ್ರೇರಕವಾಗಬಹುದು. ಪತಿ ಶಿಕ್ಷಿತನಾಗಿದ್ದು ಆಧುನಿಕ ಮನೋಭಾವವನ್ನು ಹೊಂದಿರಬಹುದು. ಆದರೆ ತನ್ನ ಪತ್ನಿ ಅಶಿಕ್ಷಿತಳಾಗಿದ್ದು, ಹಿಂದಿನ ರೀತಿಯ ಭಾವನೆ ಮತ್ತು ಅಭಿಪ್ರಾಯಗಳನ್ನು ಹೊಂದಿರಬಹುದು. ಈ ವ್ಯತ್ಯಾಸ, ತೊಡುವ ಉಡುಪು, ಅಲಂಕಾರ ಸಾಮಗ್ರಿಗಳ ಬಳಕೆ ಮತ್ತು ಮಾತಾಡುವ ರೀತಿಯಿಂದ ಹಿಡಿದು ಸ್ವಂತ ಅಭಿಪ್ರಾಯಗಳವರೆಗೆ ಸಾಕಷ್ಟು ಭಿನ್ನತೆಯನ್ನು ಹೊಂದಿರಬಹುದು. ಅಂತೆಯೇ ತನ್ನ ಪತ್ನಿ ಆಧುನಿಕ ರೀತಿಯಲ್ಲಿ ಉಡುಪನ್ನು ಧರಿಸಿ ಸಿಂಗರಿಸಿಕೊಂಡು ನಯ

ನಾಚಿಕೆಯಿಂದ ಮಾತಾಡಿ ವರ್ತಿಸಬೇಕೆಂದು ಬಯಸಿದಂತಹ ಸಂದರ್ಭಗಳಲ್ಲಿ ಪತ್ನಿ ಹಳೆಯ ರೀತಿಯಲ್ಲಿಯೇ ಇರಬಹುದು. ಇಲ್ಲಿ ಕ್ರಮೇಣ ಪತ್ನಿಯಲ್ಲಿ ಪರಿವರ್ತನೆಯನ್ನು ತರಬಹುದಾದಂತಹ ಸಾಧ್ಯತೆ ಇದ್ದೆ ಅಥವಾ ಪರಿವರ್ತನೆ ಸಾಧ್ಯವೇ ಇಲ್ಲವೆಂಬಂತಹ ಪ್ರಸಂಗಗಳಲ್ಲಿ ಪತಿಯೇ ಪರಿಸ್ಥಿತಿಗೆ ಹೊಂದಿಕೊಂಡು ಹೋಗಬೇಕಾದ ಅವಶ್ಯಕತೆ ಕಂಡುಬರುತ್ತದೆ.

ಉಡುಪು ಮತ್ತು ಅಲಂಕಾರದ ವಿಷಯದಲ್ಲಿ ತನ್ನ ಪತ್ನಿ ಅತಿ ಆಧುನಿಕವೆನಿಸುವಂತಹ ಕ್ರಮವನ್ನು ಅನುಸರಿಸದೆ, ಸ್ವಲ್ಪ ಹಳೆಯ ರೀತಿಯಲ್ಲಿಯೇ ಇರಬೇಕೆಂದು ನಿರೀಕ್ಷಿಸುವ ಪತಿಗೆ ವಿರುದ್ಧವೆನಿಸುವ ಪತ್ನಿ ದೊರೆಯಬಹುದು. ಉಡುಪು, ಸಿಂಗಾರಗಳ ವಿಷಯದಲ್ಲಿ ಆಕೆ ಆಧುನಿಕ ವೆನಿಸಿಕೊಳ್ಳಲು ಪ್ರಯತ್ನಿಸಬಹುದು. ಇಂತಹ ಸಂದರ್ಭದಲ್ಲಿ ಅಂತಿಮ ಹೊಂದಾಣಿಕೆಯ ಹೊಣೆ ಇಬ್ಬರ ಮೇಲೂ ಇರುತ್ತದೆ.

ಹೀಗೆ ಪತಿ ಶಿಕ್ಷಿತನಾಗಿದ್ದು ಪತ್ನಿ ಅಶಿಕ್ಷಿತಳಾಗಿದ್ದಂತಹ ಸಂದರ್ಭಗಳಲ್ಲಿ ಪತಿಯ ಮೇಲೆಯೆ ಹೆಚ್ಚಿನ ಹೊಣೆ ಕಂಡುಬರುತ್ತದೆ. ಶಿಕ್ಷಿತ ಪತಿ, ಪತ್ನಿಯನ್ನು ಸುಧಾರಿಸುವ ಜವಾಬ್ದಾರಿಯನ್ನು ಹೊಂದಿರುತ್ತಾನೆ, ಪತ್ನಿ ಅಶಿಕ್ಷಿತಳಾಗಿರುವ ಕಾರಣದಿಂದಲೇ ನಿರೀಕ್ಷಿತ ಮಟ್ಟದಲ್ಲಿ ಸುಧಾರಣೆ ಸಾಧ್ಯವಿಲ್ಲವೆಂದಾಗ ಪರಿಸ್ಥಿತಿಯೊಂದಿಗೆ ಹೊಂದಿಕೊಂಡು ಹೋಗುವ ಜವಾಬ್ದಾರಿಯು ಪತಿಯ ಮೇಲೆಯೇ ಇರುತ್ತದೆ.

ಇದೇ ರೀತಿ ಅಭಿಪ್ರಾಯ ಭಿನ್ನತೆಗಳಲ್ಲಿಯೂ ಪತಿ ಹೆಚ್ಚು ಹೊಣೆ ಹೊರಬೇಕಾಗುತ್ತದೆ. ಸಾಧ್ಯವಾದ ಮಟ್ಟಿಗೆ ಅಭಿಪ್ರಾಯಗಳನ್ನು ತಿದ್ದುವ ಹಾಗೂ ಹೊಂದಾಣಿಕೆಯನ್ನು ಬೆಳೆಸುವ ಹೊಣೆ ಪತಿಯದೇ ಆಗಿರುತ್ತದೆ. ಅಶಿಕ್ಷಿತ ಪತ್ನಿ ಮತ್ತು ಶಿಕ್ಷಿತ ಪತಿಯ ವಿಷಯದಲ್ಲಿ ಹೆಚ್ಚಿನ ತೀವ್ರತರ ಘರ್ಷಣೆಗೆ ಆಸ್ಪದವಿರಲಾರದು. ಇಂತಹ ಸಂದರ್ಭಗಳಲ್ಲಿ ಪತಿಯದೇ ಮೇಲುಗೈ ಆಗಿರುವುದರಿಂದ ಆತ ಸುಧಾರಿಸಿಕೊಂಡು ಹೋಗಬಹುದಾಗಿದೆ. ಇದಕ್ಕೆ ವಿರುದ್ಧವೆನಿಸುವ ಶಿಕ್ಷಿತ ಪತ್ನಿ ಮತ್ತು ಅಶಿಕ್ಷಿತ ಪತಿಯ ಸನ್ನಿವೇಶಗಳು ಅತಿ ವಿರಳ. ಆದರೂ ಅಂತಹ

ಸಂದರ್ಭಗಳಲ್ಲಿ ಸಮಯೋಚಿತವಾಗಿ ಸಂಬಂಧಪಟ್ಟವರು ಹೊಂದಾಣಿಕೆ, ಯನ್ನು ಸಾಧಿಸಬೇಕಾಗುತ್ತದೆ.

ಪತಿ–ಪತ್ನಿಯ ನಡುವೆ ಆಗಾಗ್ಗೆ ಬಿಸಿಬಿಸಿಯ ಮಾತುಕತೆ ಹಾಗೂ ಸಣ್ಣ ಪ್ರಮಾಣದ ಘರ್ಷಣೆಗೆ ಆಸ್ಪದ ಮಾಡಿಕೊಡುವ ಮತ್ತೊಂದು ಕ್ಷೇತ್ರವೆಂದರೆ ಮಡಿ ಮತ್ತು ಪೂಜೆಗೆ ಸಂಬಂಧಪಟ್ಟ ವಿಚಾರಗಳು, ಮೂಢ ನಂಬಿಕೆಗಳೆನಿಸುವ ಮಟ್ಟಿನ ಕೆಲವು ಆಚಾರಗಳು. ಪತ್ನಿ ಸಂಪ್ರದಾಯಬದ್ಧ ಆಚಾರವಂತಳೂ ಮತ್ತು ಪತಿ ಅದಕ್ಕೆ ವಿರೋಧಿಯಾಗಿರುವಂತಹ ಪ್ರಕರಣಗಳಿರಬಹುದು. ಹೀಗೆ ಆಚಾರ ವಿಚಾರಗಳಲ್ಲಿ ಭಿನ್ನತೆ ಇದ್ದಂತಹ ಸಂದರ್ಭದಲ್ಲಿ ಪತ್ನಿಯನ್ನು ಮೂಢನಂಬಿಕೆಗಳಿಂದ ಮುಕ್ತಳನ್ನಾಗಿ ಮಾಡುವ ಪ್ರಯತ್ನ ನಡೆಯಬೇಕು. ಕೆಲವು ನಂಬಿಕೆ ಮತ್ತು ಆಚಾರಗಳನ್ನು ಬದಲಾಯಿಸಲು ಸಾಧ್ಯವೇ ಇಲ್ಲದಂತಹ ಸಂದರ್ಭಗಳಲ್ಲಿ ಏನು ಮಾಡುವುದು ? ದಿನನಿತ್ಯದ ವ್ಯವಹಾರಗಳಿಗೆ ಅಡ್ಡಿಬಾರದ ಮತ್ತು ಹಾನಿಕಾರಕವಲ್ಲದ ನಂಬಿಕೆ, ಆಚರಣೆಗಳಿದ್ದರೆ, ಅವುಗಳನ್ನು ಅತಿ ಪ್ರಯಾಸ ಮತ್ತು ಬಲವಂತದಿಂದ ಬದಲಾಯಿಸುವ ಪ್ರಯತ್ನದ ಬದಲು, ಅಂತಹವರನ್ನು ಅವರಷ್ಟಿಗೇ ಬಿಡುವುದು ಹೆಚ್ಚು ಸೂಕ್ತವಲ್ಲವೆ ? ಬೇರೂರಿದಂತಹ ಹಲವು ನಂಬಿಕೆ ಮತ್ತು ಆಚರಣೆಗಳು ಒಮ್ಮೆಗೇ ಬದಲಾಗಲಾರವು. ಹಾಗೂ ಅಂತಹ ಸಂದರ್ಭಗಳಲ್ಲಿ ಸಂಬಂಧಪಟ್ಟವರಿಗೆ ಮಾನಸಿಕ ಆಘಾತ ವುಂಟಾಗುವ ಸಾಧ್ಯತೆಯೂ ಇದೆ. ಇಂತಹ ಪರಿಸ್ಥಿತಿಗಳಲ್ಲಿ, ಪತ್ನಿಯ ಮಾನಸಿಕ ತೃಪ್ತಿಗೆ ಅನುಗುಣವಾಗಿ, ಪತಿ ಹೊಂದಿಕೊಂಡು ಹೋಗುವುದೇ ಹೆಚ್ಚು ಕ್ಷೇಮ. ಪರಸ್ಪರ ಹೊಂದಾಣಿಕೆ, ನೆಮ್ಮದಿ, ಶಾಂತಿ ಮತ್ತು ಅದರಿಂದ ಸುಖವೇ ಸಂಸಾರದ ಗುರಿಯಲ್ಲವೆ ?

## ಉದ್ಯೋಗಸ್ಥ ಮಡದಿ

ಉದ್ಯೋಗಸ್ಥ ಮಹಿಳೆಯರ ಸಂಖ್ಯೆ ಹೆಚ್ಚುತ್ತಿರುವುದು ಒಂದು ಗಮನಾರ್ಹ ಪರಿವರ್ತನೆ. ಉದ್ಯೋಗದಲ್ಲಿರುವ ಹುಡುಗಿಯನ್ನೇ ವಿವಾಹವಾಗುವ ಅಥವಾ ವಿವಾಹದ ನಂತರ ಉದ್ಯೋಗಕ್ಕೆ ಕಳುಹಿಸುವ ಸನ್ನಿವೇಶ

ಗಳು ಈಗಾಗಲೆ ಸಾಕಷ್ಟಿವೆ; ಮುಂದಿನ ವರ್ಷಗಳಲ್ಲಿ ಈ ಸಂಖ್ಯೆ ಇನ್ನೂ ಹೆಚ್ಚುವ ಸಾಧ್ಯತೆ ಇದೆ.

ಉದ್ಯೋಗಸ್ಥ ಮಡದಿ ಏಕ ಕಾಲದಲ್ಲಿ ಎರಡು ಪಾತ್ರಗಳ ಕರ್ತವ್ಯ ಗಳನ್ನು ನಿರ್ವಹಿಸಬೇಕಾಗುತ್ತದೆ ಎನ್ನುವುದನ್ನು ಪತಿ ಮರೆಯಲಾಗದು. ತಾನು ತೊಡಗಿರುವ ಉದ್ಯೋಗದಲ್ಲಿ ಆಸಕ್ತಿ ವಹಿಸಿ ದುಡಿಯಬೇಕಾಗಿರು ವುದರ ಜೊತೆಯಲ್ಲಿಯೆ, ಮಡದಿಯಾಗಿ ಹಾಗೂ ತಾಯಿಯಾಗಿ, ಒಬ್ಬ ಗೃಹಿಣಿಯ ಎಲ್ಲ ಕರ್ತವ್ಯಗಳನ್ನು ನಿರ್ವಹಿಸಬೇಕಾಗುತ್ತದೆ. ಶ್ರಮ, ಸಮಯ ಮತ್ತು ಮನಸ್ಸನ್ನು ಎರಡೂ ಕ್ಷೇತ್ರಗಳಿಗೆ ವಿನಿಯೋಗಿಸಬೇಕು. ಎರಡೂ ಪಾತ್ರಗಳ ಹೊಣೆ ಉದ್ಯೋಗಸ್ಥ ಮಡದಿಯ ಮೇಲೆ ಮಾನಸಿಕ ವಾಗಿ ಹಾಗೂ ದೈಹಿಕವಾಗಿ ಸಾಕಷ್ಟು ಒತ್ತಡವನ್ನು ಹಾಕಬಲ್ಲದು. ಆಂತೆಯೇ ಪತಿ ಹೆಚ್ಚಿನ ಹೊಂದಾಣಿಕೆಯ ಭಾವನೆಯನ್ನು ಈ ಸಂದರ್ಭ ದಲ್ಲಿ ಹೊಂದಿರಬೇಕಾಗುತ್ತದೆ.

ಉದ್ಯೋಗಸ್ಥ ಮಹಿಳೆ ತಾನು ಕೈಗೊಂಡಿರುವ ಉದ್ಯೋಗವನ್ನು ಅವಲಂಬಿಸಿ, ಸಾಕಷ್ಟು ವೇಳೆಯನ್ನು ಮನೆಯ ಹೊರಗಡೆ ಕಳೆಯಬೇಕಾಗು ತ್ತದೆ. ಸ್ವತಂತ್ರಳಾಗಿ ಒಬ್ಬೊಬ್ಬಳೆ ಮನೆಯಿಂದ ಉದ್ಯೋಗದ ಸ್ಥಳಕ್ಕೆ ಓಡಾಡಿಕೊಂಡಿರಬೇಕಾಗುತ್ತದೆ. ಸಹೋದ್ಯೋಗಿಗಳ ಜೊತೆಯಲ್ಲಿ ಮಾತು ಮತ್ತು ಓಡಾಟವೂ ಹಲವೊಮ್ಮೆ ಅನಿವಾರ್ಯವೆನಿಸುತ್ತದೆ, ಆಗಾಗ್ಗೆ ಯಾವುದಾದರೂ ಕಾರಣದಿಂದ ಮನೆಗೆ ತಡವಾಗಿ ಹಿಂದಿರುಗಬೇಕಾದ ಪರಿಸ್ಥಿತಿಯೂ ಉಂಟಾಗಬಹುದು. ಇಂತಹ ಸನ್ನಿವೇಶಗಳ ಬಗೆಗೆ ಪತಿ ಸಹನೆ ಮತ್ತು ವಿಶಾಲ ಭಾವನೆಯನ್ನು ಬೆಳೆಸಿಕೊಳ್ಳಬೇಕಾಗುತ್ತದೆ. ಪತ್ನಿಯ ಪ್ರತಿ ಚಲನವಲನವನ್ನೂ ಸಂಶಯ ದೃಷ್ಟಿಯಿಂದ ನೋಡುವ ಮತ್ತು ಪ್ರತಿ ಸನ್ನಿವೇಶಕ್ಕೂ ವಿಶೇಷ ಅರ್ಥವನ್ನು ಕಲ್ಪಿಸುವ ಪ್ರವೃತ್ತಿ, ಸಂಸಾರ ದಲ್ಲಿ ದೊಡ್ಡ ಬಿರುಕನ್ನು ಸೃಷ್ಟಿಸುತ್ತದೆ; ಪತಿ ಪತ್ನಿಯ ಸಂಬಂಧ ಅಸ ಹನೀಯವೆನಿಸುತ್ತದೆ. ಪತ್ನಿಯೂ ದುಡಿಯಬೇಕೆಂದು ನಿರೀಕ್ಷಿಸುವ ಪತಿ, ಮನೆಯ ಹೊರಗಿನ ಪರಿಸ್ಥಿತಿಯನ್ನು ಮರೆತರೆ ಹೇಗೆ ? ಉದ್ಯೋಗ ನಿಮಿತ್ತ ನಿರ್ವಹಿಸಬೇಕಾದ ಅನಿವಾರ್ಯ ಪ್ರಕರಣಗಳೆಲ್ಲವನ್ನೂ ಅನವಶ್ಯಕ ಸಂಶಯ ದೃಷ್ಟಿಯಿಂದ ನೋಡಿದರೆ ಹೇಗೆ ?

# ವರದಕ್ಷಿಣೆ

ಹೆಣ್ಣು ತನ್ನೊಂದಿಗೆ ತೌರುಮನೆಯಿಂದ ಹಣ ಮತ್ತು ಇತರ ವಸ್ತುಗಳನ್ನು ತರಬೇಕೆಂಬ ನಿರೀಕ್ಷಣೆ ಮತ್ತು ಆಸೆ, ಅನೇಕ ಸಂದರ್ಭಗಳಲ್ಲಿ ಹೆಂಡತಿಯನ್ನು ಹಿಂಸಿಸಲು ಕಾರಣವಾಗಿದೆ. ಅಂತೆಯೇ ಹೆಣ್ಣಿನ ಕಡೆಯವರ ಮೇಲಿನ ಸಿಟ್ಟನ್ನು ಹೆಂಡತಿಯ ಮೇಲೆ ತೋರಿಸುವುದು ಅಥವಾ ತೌರಿನ ಕಡೆಯಿಂದ ವಸೂಲಿಗೋಸ್ಕರ ಹೆಂಡತಿಯನ್ನು ಅಸ್ತ್ರವಾಗಿ ಬಳಸುವ ಪ್ರವೃತ್ತಿ ಹಲವರಲ್ಲಿ ಕಂಡುಬರುತ್ತದೆ.

ವರದಕ್ಷಿಣೆಯನ್ನು ಕೊಡಲಿಲ್ಲವೆಂದು ಹೆಂಡತಿಯನ್ನು ತೌರಿಗೆ ಓಡಿಸುವುದು ಅಥವಾ ಕೊಟ್ಟದ್ದು ಸಾಲದೆಂದು ಪದೇ ಪದೇ ಕಿರುಕುಳ ಕೊಡುವುದು; ಅವಿದ್ಯಾವಂತಳನ್ನು ತಂದು ಕಟ್ಟಿದರು ಎಂದು ಮೂದಲಿಸುವುದು ಮತ್ತು ಅವಳನ್ನು ತಿರಸ್ಕಾರದ ದೃಷ್ಟಿಯಿಂದ ನಡೆಸಿಕೊಳ್ಳುವುದು; ಹೆಚ್ಚು ಲಕ್ಷಣವಿಲ್ಲ ಅಥವಾ ಬಣ್ಣ ಕಪ್ಪು ಎಂದು ಹೀಯಾಳಿಸಿ, ಬೇಸರ ಪಡಿಸಿ ನಡೆಸಿಕೊಳ್ಳುವುದು; ಹೀಗೆ ಹಲವು ರೀತಿಯಲ್ಲಿ ಹೆಂಡತಿಯನ್ನು ಕ್ರೂರವಾಗಿ ನಡೆಸಿಕೊಳ್ಳುವ ಪ್ರಕರಣಗಳೂ ಕಂಡುಬರುತ್ತವೆ.

ಹೆಂಡತಿಯನ್ನು ಹೊಡೆಯುವುದು, ಕ್ರೂರವಾಗಿ ನಡೆಸಿಕೊಳ್ಳುವುದು, ನಿಕೃಷ್ಟವಾಗಿ ಕಾಣುವುದು ಮತ್ತು ತೌರಿಗೆ ಓಡಿಸುವುದು ಇವೆಲ್ಲ ಸುಸಂಸ್ಕೃತ ಪುರುಷರ ಲಕ್ಷಣಗಳಲ್ಲ. ಬಾಳಸಂಗಾತಿಯಾಗಿ ಜೀವನ ಸಾಗಿಸಲು ಬರುವ ಮತ್ತು ಗಂಡನ ಸೇವೆಯಲ್ಲಿ ಅನೇಕ ಸಂದರ್ಭಗಳಲ್ಲಿ ಜೀತದಾಳಿನಂತೆ ಜೀವ ಸವೆಸುವ ಹೆಣ್ಣು, ಅರ್ಧಾಂಗಿ ಎನಿಸಿಕೊಂಡ ನಂತರವೂ ಅವಳನ್ನು ಪ್ರತ್ಯೇಕವೆಂದು ಪರಿಗಣಿಸಿ ಕಿರುಕುಳ ಕೊಡುವುದು ಅಕ್ಷಮ್ಯ ಕೃತ್ಯ. ಹೆಣ್ಣು ತನ್ನೊಡನೆ ಸಂಪತ್ತನ್ನು ತರಲೇಬೇಕೆಂದು ನಿರೀಕ್ಷಿಸಿ, ಅದಕ್ಕೋಸ್ಕರ ಹೆಂಡತಿಯನ್ನು ಹಿಂಸಿಸಿ, ಸಂಸಾರದ ಸುಖವನ್ನು ಹಾಳುಮಾಡುವ ಪುರುಷರು ಅತ್ಯಂತ ಹೀನ ಕಾರ್ಯವನ್ನು ಮಾಡಿದಂತೆಯೇ ಸರಿ.

## ತೌರಿನ ಮೂದಲಿಕೆ

ಸಂಸಾರದಲ್ಲಿ ಪತಿಪತ್ನಿಯ ನಡುವೆ ವಿರಸಕ್ಕೆ ಕಾರಣವಾಗುವ ಮತ್ತೊಂದು ಅಂಶ, ತೌರಿನ ಬಗೆಗಿನ ಮೂದಲಿಕೆಯ ಮಾತು. ತನ್ನ ತೌರುಮನೆಯ ಬಗೆಗೆ, ಅಲ್ಲಿನ ಜನರ ಬಗೆಗೆ ತಾತ್ಸಾರದ, ಮೂದಲಿಕೆಯ ಮಾತುಗಳನ್ನು ಯಾವ ಮಹಿಳೆಯೂ ಸಹಿಸುವುದಿಲ್ಲ. ಇದು ಸ್ವಾಭಾವಿಕವೂ ಹೌದು. ಆದರೆ, ಅನೇಕ ಮನೆಗಳಲ್ಲಿ, ಪತ್ನಿ ತನ್ನ ಪತಿಯಿಂದ, ತೌರಿನ ಬಗೆಗೆ ಮೂದಲಿಕೆಯ ಮಾತುಗಳನ್ನು ಆಗಾಗ್ಗೆ ಕೇಳಬೇಕಾದ ಸ್ಥಿತಿ ಕಂಡು ಬರುತ್ತದೆ.

ಪಿತೃ ಪ್ರಧಾನ ಕುಟುಂಬ ವ್ಯವಸ್ಥೆಯ ನಮ್ಮ ಸಮಾಜದಲ್ಲಿ ಪುರುಷನಿಗೆ ಹೆಚ್ಚಿನ ಸ್ಥಾನ ಕೊಟ್ಟಿರುವುದು ಸರಿಯಷ್ಟೆ. ಹೆಣ್ಣು ಎಷ್ಟೆಂದರೂ ಬೇರೆ ಮನೆಗೆ ಹೋಗುವವಳು ಎನ್ನುವ ಭಾವನೆ ಹಾಗೂ ಹೆಣ್ಣನ್ನು ಮದುವೆ ಮಾಡಿಕೊಡುವಾಗ ಕನ್ಯೆಯ ಮಾತಾಪಿತೃಗಳು ಪಡುವ ಕಷ್ಟ, ಹೆಣ್ಣು, ಹೆತ್ತ ಕುಟುಂಬಕ್ಕೆ ಹೊರೆ, ಖರ್ಚಿನ ಬಾಬ್ತು, ಎನ್ನುವ ಭಾವನೆಯನ್ನು ಮೂಡಿಸಿದೆ. ಹೆಣ್ಣು ಹೆತ್ತವರು, ಗಂಡಿನ ತಂದೆತಾಯಿಯ ಬಳಿ ವಿನಮ್ರರಾಗಿ ವರ್ತಿಸಬೇಕಾದ ಪರಿಸ್ಥಿತಿ ವ್ಯಾಪಕವಾಗಿ ಕಂಡುಬರುತ್ತದೆ.

ಹೆಣ್ಣು ಮತ್ತು ಹೆಣ್ಣಿನ ತಂದೆತಾಯಿಯ ಬಗ್ಗೆ ಇರುವ ಈ ಧೋರಣೆ, ಸಾರ್ವಜನಿಕವಾಗಿ ಅನೇಕ ಸನ್ನಿವೇಶ ಮತ್ತು ಮಾತುಕತೆಗಳಲ್ಲಿ ವ್ಯಕ್ತವಾಗುವುದನ್ನು ಗಮನಿಸಬಹುದು. ಮಾವ, ಅಂದರೆ ಹೆಣ್ಣಿನ ತಂದೆಯ ಬಗ್ಗೆ ಏಕವಚನದಲ್ಲಿ ತಾತ್ಸಾರ ಮತ್ತು ಸ್ವಲ್ಪ ನಿಕೃಷ್ಟ ರೀತಿಯಲ್ಲಿ ಮಾತನಾಡುವುದು ಕಂಡುಬರುತ್ತದೆ. ಇಂತಹುದೇ ಧಾಟಿಯಲ್ಲಿ ಅತ್ತೆ, ಅಂದರೆ, ಹೆಣ್ಣಿನ ತಾಯಿಯ ಬಗೆಗೆ ಮಾತನಾಡುವುದು ಸ್ವಾಭಾವಿಕ. ಹಲವು ಸಂದರ್ಭಗಳಲ್ಲಿ ಅತ್ತೆ ಮಾವನನ್ನು ಕುರಿತಾದ ಇಂತಹ ಮಾತು ಕತೆಗಳು ಸಭ್ಯತೆಯ ಗಡಿ ದಾಟಿ, ಅಶ್ಲೀಲವೆನಿಸುವ ಮಟ್ಟಕ್ಕೂ ಹೋಗು ವುದುಂಟು. ಈ ಧೋರಣೆ ಸರಿಯೆ ? ಅತ್ತೆ ಮಾವನ ಬಗೆಗೆ ಹೀಗೆ ಮಾತನಾಡುವ ಒಬ್ಬ ಪುರುಷ, ತನ್ನ ತಂದೆ ತಾಯಿಯ ಬಗೆಗೆ ಮಾತನಾ

ಡುವುದಿಲ್ಲವೇಕೆ ? ತನ್ನ ತಂದೆ ತಾಯಿಯ ಬಗೆಗೆ, ಹೆಂಡತಿ ಇದೇ ಧಾಟಿಯಲ್ಲಿ ಮಾತನಾಡಿದರೆ, ಪತಿ ಸಹಿಸಿಯಾನೆ ? ಇವು ಯೋಚನೆ ಮಾಡಬೇಕಾದ ವಿಷಯಗಳು.

ಗಂಡು ಶ್ರೇಷ್ಠ, ಇದರಿಂದಾಗಿ ಗಂಡಿನ ಕಡೆಯವರು ಹೆಚ್ಚು ಎನ್ನುವ ಧೋರಣೆ, ಇದಕ್ಕೆ ಪ್ರತಿಯಾಗಿ, ಹೆಣ್ಣು ಮತ್ತು ಹೆಣ್ಣಿನ ಕಡೆಯುವರು ತಾತ್ಸಾರ, ವ್ಯಂಗ್ಯ ಮತ್ತು ಚುಚ್ಚು ಮಾತುಗಳಿಗೆ ಅರ್ಹರು ಎನ್ನುವ ಭಾವನೆ ಹಲವು ಕುಟುಂಬಗಳಲ್ಲಿ ಮನಸ್ತಾಪ, ಜಗಳ ಮತ್ತು ಪತಿ ಪತ್ನಿಯಗಲ್ಲಿ ತೀವ್ರ ಅಸಮಾಧಾನಕ್ಕೆ ಎಡೆಮಾಡಿಕೊಡಬಹುದು.

ಪತಿ, ತನ್ನ ಪತ್ನಿಯ ತೌರಿನ ಬಗೆಗೆ ತಾತ್ಸಾರ ಮತ್ತು ವ್ಯಂಗ್ಯವಾಗಿ ಮಾತನಾಡುವುದು ಸೂಕ್ತವಲ್ಲ. ಉದ್ದೇಶಪೂರಿತವಾಗಿ ತೌರಿನ ಕಡೆಯವರಲ್ಲಿ ತಪ್ಪನ್ನು ಹುಡುಕುವ ಪ್ರವೃತ್ತಿ ಮತ್ತು ಪತ್ನಿಯಲ್ಲಿ ಇರಬಹುದಾದ ಎಲ್ಲ ಲೋಪಗಳಿಗೆ ತೌರಿನ ಕಡೆಯವರೇ ಕಾರಣರೆಂದು ಪದೇ ಪದೇ ಚುಚ್ಚಿ ಮಾತನಾಡುವುದು ಸೂಕ್ತವಲ್ಲ, ಇಂತಹ ಮಾತುಗಳು ಪತ್ನಿಯ ಮನಸ್ಸಿಗೆ ತೀವ್ರ ನೋವನ್ನುಂಟುಮಾಡುತ್ತವೆ. ಹೆತ್ತ ತಂದೆ ತಾಯಿಗಳ ಮತ್ತು ಮನೆಯ ಬಗೆಗೆ ನಿಂದನೆಯ ಮಾತನ್ನು ಯಾವ ಹೆಣ್ಣುಮಗಳು ತಾನೇ ಸಹಿಸಿಯಾಳು ? ಪುರುಷನಿಗೆ ತನ್ನ ತಂದೆ ತಾಯಿ ಮತ್ತು ಮನೆತನದ ಬಗೆಗೆ ಇರುವಷ್ಟೇ ಅಭಿಮಾನ, ಸ್ತ್ರೀಗೆ ತನ್ನ ತೌರು ಮನೆಯ ಬಗೆಗೆ ಇರಲಾರದೆ ? ಹುಟ್ಟಿಬೆಳೆದ ಮನೆ ಮತ್ತು ಜನರನ್ನು ತೊರೆದು, ಹೊಸಮನೆ ಮತ್ತು ವ್ಯಕ್ತಿಯೊಂದಿಗೆ ಬಾಳಲು ಬರುವ ಪತ್ನಿಯ ಮನಸ್ಸನ್ನು ನೋಯಿಸುವ ಇಂತಹ ವರ್ತನೆ ಸರಿಯೆ ಎಂದು ಯೋಚಿಸಬೇಕು.

ಸ್ತ್ರೀಯನ್ನು ನಿಕೃಷ್ಟವಾಗಿ ಕಾಣುವ ನೆಪದಲ್ಲಿ ಮತ್ತೊಬ್ಬ ಪುರುಷನನ್ನು, ಅಂದರೆ ಮಾವನನ್ನು ನಿಕೃಷ್ಟವಾಗಿ ಕಾಣಬಯಸುವ ಈ ಪ್ರವೃತ್ತಿ ಆಭಾಸಪೂರ್ಣವಾದುದು. ಹೆಣ್ಣು ಹೆತ್ತವರ ಬಗೆಗೆ ಈಗ ಚುಚ್ಚು ಮಾತನಾಡುವವರೂ ಹೆಣ್ಣು ಹೊತ್ತು, ಮತ್ತೊಬ್ಬನಿಂದ ನಿಂದನೆಗೊಳಗಾಗ

ಬಹುದಾದ ವಿಷವರ್ತುಲವನ್ನು ಪುರುಷನೇ ಸೃಷ್ಟಿಸಿಕೊಳ್ಳುವ ಸ್ಥಿತಿಯಂತೂ ವಿಪರ್ಯಾಸಪೂರ್ಣವಾದುದು.

## ಕಾಲ್ಗುಣ

ವಿವಾಹದ ನಂತರ ಮನೆಯಲ್ಲಿ ಜರುಗಬಹುದಾದಂತಹ ಅಹಿತಕರ ಮತ್ತು ಆಕಸ್ಮಿಕ ಘಟನೆಗಳಿಗೆ ಮನೆತುಂಬಿದ ಹೆಣ್ಣು ಹೊಣೆ ಎಂದು ದೂಷಿಸಿ ಹಿಂಸಿಸುವುದು ಅಥವಾ ಪದೇ ಪದೇ ಮೂದಲಿಸುವುದು ಹಲವೆಡೆ ಕಂಡುಬರುತ್ತದೆ, ಅಪಘಾತ ಸಂಭವಿಸಿ ಮನೆಯಲ್ಲಿ ಯಾರಾದರೂ ಕೈ ಕಾಲುಗಳನ್ನು ಕಳೆದುಕೊಳ್ಳಬಹುದು, ಅಪಘಾತ ಅಥವಾ ಕಾಯಿಲೆಗಳಿಂದ ಸಾವು ಸಂಭವಿಸಬಹುದು, ವ್ಯಾಪಾರ ಅಥವಾ ಉದ್ಯೋಗದಲ್ಲಿ ತೀವ್ರ ನಷ್ಟ ಅನುಭವಿಸಬೇಕಾಗಬಹುದು,ಮನೆಯಲ್ಲಿ ಕಳ್ಳತನ, ಹೊಡೆದಾಟ,ಆಸ್ತಿವಿಭಜನೆ ಇತ್ಯಾದಿ ಹಲವು ಪ್ರಕರಣಗಳು ಹಲವಾರು ಕುಟುಂಬಗಳಲ್ಲಿ, ಆಗಾಗ್ಗೆ ಸಂಭವಿಸುತ್ತಲೇ ಇರುತ್ತವೆ. ಆದರೆ ಮದುವೆಯಾದ ಹೊಸದರಲ್ಲಿ ಇಂತಹ ಪ್ರಕರಣ ಅಥವಾ ಘಟನೆಗಳು ಜರುಗಿದರೆ, ಆಗ ಹೊಸದಾಗಿ ಮನೆಗೆ ಬಂದ ಹೆಣ್ಣಿನ ಕಾಲುಗುಣ ಒಳ್ಳೆಯದಲ್ಲ ಎಂದು ಭಾವಿಸುವ ವರಿಗೇನೂ ಕೊರತೆಯಿಲ್ಲ.

ಅಂತೆಯೆ, ಬಹಳ ಕಾಲದವರೆಗೆ ಮಕ್ಕಳು ಆಗದಿರುವಿಕೆ, ಹುಟ್ಟುವ ಮಕ್ಕಳಲ್ಲಿ ಕಂಡುಬರಬಹುದಾದಂತಹ ದೈಹಿಕ ನ್ಯೂನತೆ ಅಥವಾ ಹೆಣ್ಣು ಮಕ್ಕಳೇ ಹೆಚ್ಚು ಹುಟ್ಟುವುದು, ಇತ್ಯಾದಿ ಹಲವು ಸನ್ನಿವೇಶಗಳಲ್ಲಿಯೂ ಹೆಂಡತಿಯನ್ನು ದೂಷಿಸಿ ದುಃಖಕ್ಕೆ ಒಳಗಾಗಿಸುವುದು ಇನ್ನೊಂದು ರೀತಿಯ ವಿಚಿತ್ರ ಪರಿಸ್ಥಿತಿ. ಮೇಲಿನ ಪ್ರಕರಣಗಳಲ್ಲಿ ಹೆಂಡತಿಯನ್ನು ಮಾತ್ರ ದೂಷಿಸುವುದು ಸರಿಯೆ ? ಈ ಪ್ರಕರಣಗಳಿಗೆ ಪತಿಯೇ ಏಕೆ ಕಾರಣ ನಾಗಿರಬಾರದು ಎನ್ನುವ ಪ್ರಶ್ನೆಗೆ ಉತ್ತರವನ್ನು ಕಂಡುಕೊಳ್ಳದೆ, ಪತ್ನಿ ಯನ್ನು ಅನವಶ್ಯಕವಾಗಿ ದೂಷಿಸುವುದು ಸಲ್ಲದು. ಅಲ್ಲದೆ ಯಾರೊಬ್ಬರು ಕಾರಣವೆನಿಸಿದರೂ ಸಹ, ದೂಷಿಸುವುದರಿಂದ ಅಥವಾ ಹಿಂಸಿಸುವುದರಿಂದ ಪರಿಸ್ಥಿತಿ ಸುಧಾರಿಸಲಾರದು. ಸಂಬಂಧಪಟ್ಟವರಿಂದ ಸೂಕ್ತ ಸಲಹೆ ಮತ್ತು- ಚಿಕಿತ್ಸೆ ಸಮಸ್ಯೆಯನ್ನು ಬಗೆಹರಿಸಬಲ್ಲದು.

## ಸಿಟ್ಟಿನ ಪರಿಣಾಮ

ಹಲವೊಮ್ಮೆ ತಾಳ್ಮೆಗೆಡುವ ಸಂದರ್ಭಗಳು, ಸಿಟ್ಟು ತರಿಸುವ ಪ್ರಕರಣಗಳು ಸಂಸಾರದಲ್ಲಿ ಸ್ವಾಭಾವಿಕ. ಇಂತಹ ಸಂದರ್ಭಗಳಲ್ಲಿ ಹೆಚ್ಚಿನ ಜಾಗೃತಿಯನ್ನು ವಹಿಸಬೇಕಾಗುತ್ತದೆ. ಸಾಮಾನ್ಯತರ ಸಿಟ್ಟು ಮತ್ತು ಮುನಿಸು, ಮುಸುಕಿದ ಮೋಡ ಕ್ರಮೇಣ ಕಣ್ಮರೆಯಾಗುವಂತೆ, ಹಾಗೆಯೇ ಕರಗಿ ಹೋಗಬಹುದು. ಆದರೆ ತಾಳ್ಮೆಗೆಟ್ಟ ಸಿಟ್ಟು ಮತ್ತು ವರ್ತನೆ ಅಪಾಯಕಾರಿ.

ಸಿಟ್ಟಿನಿಂದ ಆಡುವ ಮಾತುಗಳು, ಕೋಪದಲ್ಲಿ ಮಾಡುವ ಕಾರ್ಯ, ನೆಮ್ಮದಿಯ ಸಂಸಾರದ ಮೇಲೆ ಮಾಸಲಾಗದ ಬರೆಯನ್ನು ಎಳೆಯಬಹುದು. ಸಿಟ್ಟಿನ ರಭಸದಲ್ಲಿ ಹೆಂಡತಿಯನ್ನು ಹೊಡೆಯುವ, ಅತ್ಯಂತ ಕ್ರೂರವಾಗಿ ವರ್ತಿಸುವ ಸಾಧ್ಯತೆ ಇದೆ. ಪತ್ನಿಯ ಸ್ವಾಭಿಮಾನವನ್ನು ಕೆಣಕುವ, ಆಕೆಯ ಶೀಲವನ್ನೇ ಶಂಕಿಸುವಂತಹ ಮಾತುಗಳನ್ನೂ ಸಿಟ್ಟಿನಲ್ಲಿ ಆಡುವ ಸಾಧ್ಯತೆ ಇದೆ. ಸಿಟ್ಟಿನ ಇಂತಹ ಮಾತು ಮತ್ತು ವರ್ತನೆ, ಪತಿ ಪತ್ನಿಯ ನಡುವೆ ಕಹಿ ವಾತಾವರಣವನ್ನು ಉಂಟುಮಾಡಬಲ್ಲವು; ಅನೇಕ ವೇಳೆ ದುರಂತಕ್ಕೆ ಆಸ್ಪದವಾಗಬಹುದು. ಹಿಂಸೆ, ಕೊಲೆ, ಓಡಿಹೋಗುವುದು, ಆತ್ಮಹತ್ಯೆ ಇತ್ಯಾದಿ ಪರಿಸ್ಥಿತಿ, ಸಿಟ್ಟಿನ ವರ್ತನೆಯಿಂದಾಗಿ ಸಂಭವಿಸಬಹುದು.

ಎಲ್ಲ ಸಂದರ್ಭಗಳಲ್ಲಿಯೂ ಪರಿಸ್ಥಿತಿ ಪ್ರಕೋಪಕ್ಕೆ ಹೋಗಬೇಕೆಂದೇನೂ ಇಲ್ಲ. ಆದರೆ ಸಿಟ್ಟಿನಲ್ಲಿ ದುಡುಕಿ ಆಡುವ ಮಾತು ಅಥವಾ ವರ್ತನೆ, ಪತ್ನಿಯ ಮನ ನೋಯಿಸುವ ಸಂದರ್ಭಗಳಿಗೇನೂ ಕೊರತೆಯಿಲ್ಲ. ದುಡುಕಿನ ವರ್ತನೆ ಪದೇ ಪದೇ ನಡೆದಲ್ಲಿ ಅದು ಪತ್ನಿಯ ಮನಸ್ಸಿನ ಮೇಲೆ ತೀವ್ರತರ ಪರಿಣಾಮ ಬೀರಬಲ್ಲದು; ಪತಿಪತ್ನಿಯ ಉತ್ತಮ ಬಾಂಧವ್ಯಕ್ಕೆ ಅಡ್ಡಿಯಾಗಬಲ್ಲದು.

ಅಂತೆಯೆ ಸಿಟ್ಟಿನ ಸಂದರ್ಭಗಳಲ್ಲಿ ತಾಳ್ಮೆಯನ್ನು, ಬುದ್ಧಿಯನ್ನು ಕಳೆದುಕೊಳ್ಳದೆ ವರ್ತಿಸುವುದು ಆವಶ್ಯಕ. ಸಿಟ್ಟಿನ ಪರಿಸ್ಥಿತಿಯಲ್ಲಿ ಯಾವ ನಿರ್ಧಾರವನ್ನೂ ಕೈಗೊಳ್ಳದೆ, ಹೆಚ್ಚು ಮಾತನ್ನು ಆಡದೆ, ಶಾಂತ ಮನಸ್ಕ

ನಾದ ಮೇಲೆ ಪರಿಸ್ಥಿತಿಯನ್ನು ಅರ್ಥಮಾಡಿಕೊಂಡು ವರ್ತಿಸುವುದು ಒಳ್ಳೆಯದು.

ಮೇಲಿನ ಎಲ್ಲ ಪ್ರಕರಣಗಳೂ ಮನೆಯಲ್ಲಿ ಅಶಾಂತಿಯ ವಾತಾವರಣವನ್ನು ಸೃಷ್ಟಿಸಬಲ್ಲವು; ಪತಿಪತ್ನಿಯ ನಡುವೆ ಅಸಮಾಧಾನ, ಮನಸ್ತಾಪಗಳಿಗೆ ಆಸ್ಪದ ಮಾಡಿಕೊಡಬಲ್ಲವು. ಆದ್ದರಿಂದ ಯಾವುದೇ ಪ್ರಕರಣವನ್ನು ಸಹನೆ, ವಿವೇಚನೆ ಮತ್ತು ವಿಶಾಲ ಭಾವನೆಯಿಂದ ಪರಿಶೀಲಿಸುವ ಅಭ್ಯಾಸ ಒಳ್ಳೆಯದು. ಇದರಿಂದಾಗಿ ಅಹಿತಕರ ವಾತಾವರಣವನ್ನು ತಡೆಹಿಡಿದು, ಪರಸ್ಪರ ಅರ್ಥಮಾಡಿಕೊಳ್ಳುವ, ಹೊಂದಾಣಿಕೆಯ ಜೀವನ ಸಾಧ್ಯವೆನಿಸುತ್ತದೆ.

## ಮನೆಗೆಲಸದಲ್ಲಿ ನೆರವು

ಗಂಡಸು ಮನೆಯ ಹೊರಗಡೆ ದುಡಿಯಬೇಕು, ಹೆಂಗಸು ಮನೆಯ ಒಳಗೆ ಎಲ್ಲ ಕಾರ್ಯಗಳನ್ನೂ ತಾನೇ ನಿರ್ವಹಿಸಬೇಕು ಎನ್ನುವುದು ವ್ಯಾಪಕವಾಗಿ ಕಂಡುಬರುವ ಶ್ರಮ ವಿಭಜನಾ ಕ್ರಮ. ಈ ಕ್ರಮವನ್ನು ಅಕ್ಷರಶಃ ಪಾಲಿಸುವ ಪರಿಸ್ಥಿತಿ ಎಲ್ಲೆಡೆ ಕಂಡುಬರುತ್ತದೆ. ಅಂದರೆ, ಗಂಡಸು ಮನೆಯ ಯಾವುದೇ ಕೆಲಸವನ್ನೂ ಮಾಡಬಾರದು, ಅದು ಪೂರ್ಣವಾಗಿ ಸ್ತ್ರೀಯರ ಕೆಲಸ ಎಂಬ ಭಾವನೆ ಆಳವಾಗಿ ಬೇರೂರಿರುವುದೂ ಕಂಡುಬರುತ್ತದೆ. ಇಷ್ಟೆ ಅಲ್ಲ, ಮನೆಯ ಕೆಲಸದಲ್ಲಿ ಪತಿ ನೆರವಾಗುವುದು ನಾಚಿಕೆಗೇಡಿನ ಕೆಲಸವೆಂದೂ, ಅದು ಹೊರಗಿನವರ ಗಮನಕ್ಕೆ ಬಂದರೆ ಅವಮಾನಕರವೆಂತಲೂ ಭಾವಿಸುವುದುಂಟು. ಮನೆಗೆಲಸದಲ್ಲಿ ಭಾಗಿಯಾಗುವವರನ್ನು ಅನೇಕ ವೇಳೆ 'ಹೆಣ್ಣಿಗ', 'ಹೆಂಡತಿಯ ಗುಲಾಮ', ಇತ್ಯಾದಿ ಮೂದಲಿಕೆಯ ಮಾತುಗಳಿಂದ ಛೇಡಿಸುವುದು ಅಥವಾ ಪಿಸುಮಾತಾಡುವುದೂ ಕಂಡು ಬರುತ್ತದೆ. ಇದರ ಪರಿಣಾಮವಾಗಿ ಪುರುಷನಾದವನು ಮನೆಯ ಯಾವುದೇ ಕೆಲಸದಲ್ಲಿಯೂ ಭಾಗವಹಿಸದೆ, ಸ್ತ್ರೀಯೇ ಎಲ್ಲವನ್ನೂ ನಿರ್ವಹಿಸಬೇಕೆಂದು ನಿರೀಕ್ಷಿಸುತ್ತಾನೆ, ಔಚಿತ್ಯಾನೌಚಿತ್ಯಗಳ ಪರಿಶೀಲನೆ ಇಲ್ಲದೆ, ಹಿಂದಿನ ಪದ್ಧತಿಯನ್ನೇ ಪಾಲಿಸಿಕೊಂಡು ಹೋಗುವ ಮನೋಪ್ರವೃತ್ತಿಯ ಫಲವಾಗಿ ಈ ದೃಷ್ಟಿಕೋನ ಬೆಳೆಯುತ್ತಿದೆ.

ವ್ಯಾಪಕವಾಗಿರುವ ಈ ವರ್ತನೆ ಮತ್ತು ಧೋರಣೆ ಎಷ್ಟರ ಮಟ್ಟಿಗೆ ಸರಿ ಎಂದು ಯೋಚಿಸಬಹುದು. ಮನೆಯ ಒಳಗಿನ ಮತ್ತು ಹೊರಗಿನ ಕೆಲಸಗಳಲ್ಲಿ ಇಂದು ಸಾಕಷ್ಟು ಬದಲಾವಣೆಗಳಾಗಿವೆ, ಮಹಿಳೆಯರ ಶಿಕ್ಷಣ, ಸಾಮಾಜಿಕ ಕ್ಷೇತ್ರದಲ್ಲಿ ಮಹತ್ತರ ಪರಿವರ್ತನೆಯನ್ನು ತರುತ್ತಿದೆ. ಮಹಿಳೆಯರ ಉದ್ಯೋಗದ ಅವಕಾಶ ಮತ್ತು ಆರ್ಥಿಕ ಸ್ವಾವಲಂಬನೆಯ ಸನ್ನಿವೇಶಗಳು ಹೆಚ್ಚುತ್ತಿವೆ, ಮಹಿಳೆಯರ ಸ್ವಾತಂತ್ರ್ಯ, ಹಕ್ಕು-ಕರ್ತವ್ಯಗಳ ಬಗೆಗೆ ಬೇಡಿಕೆ ಹಾಗೂ ಚರ್ಚೆಗಳೂ ಕಂಡುಬರುತ್ತಿವೆ.

ಆಧುನಿಕ ಸಮಾಜದ ಜವಾಬ್ದಾರಿ ಪ್ರಜೆಗಳನ್ನಾಗಿ ಕಿರಿಯರನ್ನೂ ಸಿದ್ಧ ಪಡಿಸುವ ಕಾರ್ಯ ಹಿರಿಯರಿಂದ ಶ್ರಮ ಮತ್ತು ಪರಿಶ್ರಮವನ್ನು ನಿರೀಕ್ಷಿ ಸುತ್ತದೆ. ಅಂತೆಯೆ ಮಕ್ಕಳ ಪೋಷಣೆಯ ವಿಷಯವೂ ಸೂಕ್ಷ್ಮತರವೆನಿಸಿದೆ.

ಮಹಿಳೆಯ ಮನೆಯ ಒಳಗಿನ ಕೆಲಸಕ್ಕಿಂತ ಪುರುಷರ ಮನೆಯ ಹೊರಗಿನ ಕೆಲಸ ಹೆಚ್ಚು ಕಷ್ಟದಾಯಕ ಎನ್ನುವ ಅಭಿಪ್ರಾಯ ಪ್ರಚಲಿತ ವಿದೆ. ದೈಹಿಕ ಶ್ರಮದ, ಗ್ರಾಮಗಳಲ್ಲಿನ ಮತ್ತು ನಗರದ ಹಲವು ದುಡಿಮೆಗಳನ್ನು ಬಿಟ್ಟರೆ, ಆಫೀಸುಗಳಲ್ಲಿನ ಉದ್ಯೋಗಗಳು ಎಷ್ಟರಮಟ್ಟಿಗೆ ಶ್ರಮದಾಯಕ ಎಂದು ಯೋಚಿಸಬಹುದು. ಮನೆ ಎಂದ ಮೇಲೆ ದಿನ ಇಡೀ ದುಡಿದರೂ ಮುಗಿಯದಷ್ಟು ಕೆಲಸವಿರುತ್ತದೆ. ಭಾರತೀಯ ಮಹಿಳೆ, ಅಡಿಗೆ ಮಾಡುವುದರಿಂದ ಹಿಡಿದು ಸಣ್ಣಪುಟ್ಟ ಕಾರ್ಯಗಳೆಲ್ಲವನ್ನೂ ಸ್ವತಃ ಮಾಡುವುದರ ಮೂಲಕ ಸಾಕಷ್ಟು ದಣಿಯುತ್ತಾಳೆ. ಗೃಹಿಣಿಯು ನಿರ್ವ ಹಿಸುವ ಗೃಹಕೃತ್ಯಗಳು, ಶ್ರಮ ಮತ್ತು ಜವಾಬ್ದಾರಿಯ ದೃಷ್ಟಿಯಿಂದ, ಹೊರಗಡೆ ದುಡಿಯುವ ಪತಿಯ ಕೆಲಸಗಳಿಗಿಂತ ಕಡಿಮೆಯಲ್ಲ ಎನ್ನುವುದೂ ಗಮನಾರ್ಹ, ಯಾಂತ್ರಿಕ ರೀತಿಯ ಗೃಹಕೃತ್ಯಗಳ ದುಡಿಮೆ, ಅದರಲ್ಲಿಯೂ ಮಧ್ಯಮ ಮತ್ತು ಬಡವರ್ಗ ಕುಟುಂಬಗಳಲ್ಲಿ, ಗೃಹಿಣಿಯ ಮೇಲೆ ಮಾನ ಸಿಕ ಮತ್ತು ಶಾರೀರಿಕ ದುರ್ಬಲತೆಯನ್ನು ಉಂಟುಮಾಡುವಷ್ಟರ ಮಟ್ಟಿನ ಒತ್ತಡವನ್ನು ಹೇರುತ್ತದೆ.

ಮೇಲಿನ ಕಾರಣಗಳಿಂದಾಗಿ ಪತಿ ತನ್ನ ಮನೆಯ ಅನೇಕ ಕೆಲಸ ಗಳಲ್ಲಿ ಭಾಗವಹಿಸುವುದು ಹಾಗೂ ಪತ್ನಿಗೆ ನೆರವಾಗುವುದು ಅನಿವಾರ್ಯ; ಅತ್ಯಂತ ಅವಶ್ಯವೂ ಕೂಡ. ಮನೆಗೆಲಸದಲ್ಲಿ ಪತಿಯ ನೆರವು ಪತ್ನಿಗೆ ನೆಮ್ಮದಿಯನ್ನು ತಂದುಕೊಡಬಲ್ಲದು. ಈ ನೆರವು ಪತ್ನಿಗೆ ಕೆಲಸದ ಭಾರ ವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡುವುದರ ಜೊತೆಗೆ, ಪತಿ ಪತ್ನಿ, ಇಬ್ಬರಿಗೂ ಒಂದು ರೀತಿಯ ಮಾನಸಿಕ ತೃಪ್ತಿಯನ್ನು ತಂದುಕೊಡಬಲ್ಲದು.

ಪತ್ನಿಯೂ ಉದ್ಯೋಗದಲ್ಲಿ ತೊಡಗುವುದರಿಂದ ಉಂಟಾಗುವ ಪರಿಸ್ಥಿತಿಯನ್ನು ಅರಿತು, ಹೊಸ ದೃಷ್ಟಿಕೋನವನ್ನು ಬೆಳೆಸಿಕೊಂಡ ಹಲವರು

ಸ್ವಯಂ ಪ್ರೇರಣೆಯಿಂದ ಮನೆಗೆಲಸದಲ್ಲಿ ನೆರವು ನೀಡುತ್ತಿರಬಹುದು. ಇನ್ನು ಕೆಲವರು ಪರಿಸ್ಥಿತಿಯ ಒತ್ತಡಕ್ಕೆ ಒಳಗಾಗಿ ನೆರವು ನೀಡುತ್ತಿರಬಹುದು. ಒಟ್ಟಿನಲ್ಲಿ ಪತ್ನಿಯೂ ಉದ್ಯೋಗಸ್ಥಳಾಗಿರುವ ಸಂಸಾರಗಳಲ್ಲಿ ಪತಿ ಅನಿವಾರ್ಯವಾಗಿ ಮನೆಗೆಲಸದಲ್ಲಿ ನೆರವಾಗಬೇಕಾಗುತ್ತದೆ.

ದಿನದ ದುಡಿಮೆಯ ನಂತರ ಹಿಂದಿರುಗುವ ಉದ್ಯೋಗಸ್ಥ ಮಡದಿ ಮನೆಯಲ್ಲಿ ಪುನಃ ಅನೇಕ ಕೆಲಸಗಳನ್ನು ಮಾಡಬೇಕಾಗಬಹುದು. ಮನೆಯ ಯಜಮಾನಿಯಾಗಿ, ಮಕ್ಕಳ ತಾಯಿಯಾಗಿ ಗೃಹಕೃತ್ಯಗಳಲ್ಲಿ ತೊಡಗದೇ ಇರಲು ಆಗುವುದಿಲ್ಲ. ಹೊರಗಿನ ದುಡಿಮೆಯ ಜೊತೆಗೆ ಮನೆಯ ದುಡಿಮೆ ಸಾಕಷ್ಟು ಬಳಲಿಕೆ, ಬೇಸರವನ್ನು ತರಿಸಬಲ್ಲದು. ಪ್ರತಿದಿನ ಉದ್ಯೋಗಕ್ಕೆ ಹೊರಡುವಾಗಲೂ ಗಡಿಬಿಡಿಯ ವಾತಾವರಣ. ಮೇಲಿನ ಪರಿಸ್ಥಿತಿಯಲ್ಲಿ ಪತಿ ಮನೆಗೆಲಸದಲ್ಲಿ ಸಾಕಷ್ಟು ನೆರವಾಗಬಹುದು. ದುಡಿದು ಬಂದ ಪತಿ, 'ಹೊರಗಡೆ ನಾನು ದಣಿದು ಬಂದಿದ್ದೇನೆ, ನನಗೆ ವಿಶ್ರಾಂತಿ ಬೇಕು' ಎಂದು ಹೇಳುವಂತೆಯೇ, ಉದ್ಯೋಗಸ್ಥ ಮಡದಿಯೂ ಹೇಳಿದರೆ ಮನೆಯ ವಾತಾವರಣ ಏನಾಗಬಹುದು ? ಆದರೆ ಸಾಮಾನ್ಯವಾಗಿ ಸತಿ ಆ ರೀತಿ ಹೇಳದೆ ಮನೆಗೆಲಸದಲ್ಲಿಯೂ ತೊಡಗುವುದು ಕಂಡು ಬರುತ್ತದೆ. ಅಂತೆಯೇ ಪತಿ ಅಧಿಕಾರವನ್ನು ಚಲಾಯಿಸುತ್ತಾ ಮನೆಯ ಎಲ್ಲ ಕಾರ್ಯಗಳನ್ನೂ ಪತ್ನಿಯೇ ಮಾಡಬೇಕೆಂದು ನಿರೀಕ್ಷಿಸದೆ, ತಾನು ಎಷ್ಟರ ಮಟ್ಟಿಗೆ ಗೃಹ ಕೃತ್ಯಗಳಲ್ಲಿ ನೆರವಾಗಲು ಸಾಧ್ಯ ಎಂದು ಯೋಚಿಸಿ ಅದರಂತೆ ವರ್ತಿಸುವುದು ಸೂಕ್ತ.

ಮಡದಿಯೂ ಉದೋಗದಲ್ಲಿ ತೊಡಗಿರುವ ಸಂಸಾರಗಳಲ್ಲಿ ಮಾತ್ರ ಈ ನೆರವು ಅಗತ್ಯ ಎಂದೇನೂ ಅರ್ಥವಲ್ಲ. ಯಾವುದೇ ಉದ್ಯೋಗಕ್ಕೆ ಹೋಗದೆ, ಗೃಹಕೃತ್ಯಗಳಗಲ್ಲಿ ಮಾತ್ರ ತೊಡಗಿರುವ ಗೃಹಿಣಿಗೂ ನೆರವಿನ ಅಗತ್ಯವಿದ್ದು ತನಗೆ ಸಾಧ್ಯವಾದ ಮಟ್ಟಿಗೆ ಪತಿ, ಮನೆಗೆಲಸದಲ್ಲಿ ನೆರವು ನೀಡುವುದರಿಂದ ಸಂಸಾರ ಸುಸೂತ್ರವಾಗಿ ಮುಂದುವರೆಯುಬಲ್ಲದು. ಹಾಗೂ ಪತಿ ಪತ್ನಿಯ ಮಾನಸಿಕ ಹೊಂದಾಣಿಕೆಗೂ ಕಾರಣವಾಗಬಲ್ಲದು.

ಗೃಹಕೃತ್ಯಗಳಲ್ಲಿ ಪತಿಯು ಕೊಡಬಹುದಾದಂತಹ ನೆರವು, ಮನೆಯಿಂದ ಮನೆಗೆ, ಪಟ್ಟಣದಿಂದ ಹಳ್ಳಿಗೆ ವ್ಯತ್ಯಾಸವಾಗುತ್ತಾ ಹೋಗಬಹುದು. ಒಂದು ಮನೆಯ ಅಥವಾ ಪ್ರದೇಶದ ಪರಿಸ್ಥಿತಿಗೆ ಅನುಗುಣವಾಗಿ, ಯಾವ ರೀತಿಯಲ್ಲಿ ಮನೆಗೆಲಸದಲ್ಲಿ ನೆರವಾಗಬಹುದು ಎಂದು ನಿರ್ಧರಿಸಬೇಕಾಗುತ್ತದೆ. ಬಾವಿಯಿಂದ ಅಥವಾ ಮನೆಯ ಹೊರಗಡೆ ನಲ್ಲಿಯಿಂದ ನೀರನ್ನು ಒಳಗೆ ಹಿಡಿಯುವ ಕಾರ್ಯ ಮಾಡುವುದು ಅಥವಾ ಅಂತಹ ಕಾರ್ಯದಲ್ಲಿ ಸಹಾಯ ನೀಡುವುದು, ಸ್ನಾನದ ನೀರಿನ ವ್ಯವಸ್ಥೆ ನೋಡಿಕೊಳ್ಳುವುದು, ಅಥವಾ ಸಾಧ್ಯವೆನಿಸುವ ಮಟ್ಟಿನ ಇತರ ಯಾವುದೇ ಕೆಲಸಗಳನ್ನೂ ನಿರ್ವಹಿಸಬಹುದು. ಸ್ನಾನ ಮಾಡಿಸಬೇಕಾದ ವಯಸ್ಸಿನ ಮಕ್ಕಳಿಗೆ ಸ್ನಾನವನ್ನು ಮಾಡಿಸಬಹುದು. ಇದರಿಂದ ತಾಯಿಗೆ ಸ್ವಲ್ಪ ಮಟ್ಟಿನ ಹೊರೆ ಕಡಿಮೆಯಾದಂತೆನಿಸುವುದರ ಜೊತೆಯಲ್ಲಿ, ತಂದೆಗೆ ಮಕ್ಕಳೊಡನೆ ಹೆಚ್ಚು ಆತ್ಮೀಯವಾಗಿ ಬೆರೆಯಬಹುದಾದ ಅವಕಾಶ ದೊರೆಯುತ್ತದೆ. ಉಲ್ಲಾಸಕರವೆನಿಸುವ ಈ ಕಾರ್ಯದ ಜೊತೆಯಲ್ಲಿ, ಮಕ್ಕಳಿಗೆ ಆರೋಗ್ಯ ನಿಯಮಗಳ ಬೋಧನೆ ಮತ್ತು ಒಳ್ಳೆಯ ನಡತೆಯ ಬಗೆಗೆ ತಿಳಿವಳಿಕೆಗಳನ್ನು ಕೊಡಬಹುದು.

ಕಿಲಕಿಲ ನಕ್ಕು ನಲಿದಾಡುವ ಪುಟ್ಟ ಮಗು ಅಥವಾ ಮಕ್ಕಳು ಸುಖಸಂಸಾರಕ್ಕೆ ಕಚಕುಳಿಯಿಟ್ಟಂತೆ. ಮಕ್ಕಳ ನಗು, ಓಡಾಟ, ಸಂಸಾರದ ಬಿಸಿ ವಾತಾವರಣಕ್ಕೆ ತಂಪನ್ನೀಯುವುದು. ಅಂತೆಯೆ, 'ಕೆಟ್ಟರೆ ಕೆಡಲಿ ಮನೆಗೆಲಸ, ಮಕ್ಕಳಿರಲಿ ಮನೆತುಂಬ' ಎಂದು ಹೇಳುವುದುಂಟು. ಆದರೆ, ಮಕ್ಕಳಿಂದ ಮನೆಗೆಲಸ ಕೆಡಲು ಪ್ರಾರಂಭವಾದಾಗ ಆಗುವ ಅನುಭವವೇ ಬೇರೆ. ಚಿಕ್ಕಮಕ್ಕಳಿಂದ ಉಂಟಾಗುವ ಸಮಸ್ಯೆ ಒಂದು ರೀತಿಯದಾದರೆ, ಸ್ವಲ್ಪ ಬೆಳೆದ ಮಕ್ಕಳಿಂದ ಉಂಟಾಗುವ ಸಮಸ್ಯೆ ಮತ್ತೊಂದು ರೀತಿಯದು. ಸದಾ ಅಳುತ್ತಾ, 'ಎತ್ತೂ' ಎಂದು ಹೇಳುತ್ತಾ ಹಿಂದೆ ಮುಂದೆ ಸುಳಿದಾಡಿ ಕಿರಿಕಿರಿ ಮಾಡುವ ಮಕ್ಕಳು ಮುಖ್ಯವಾಗಿ ತಾಯಿಗೆ ಆಗಾಗ್ಗೆ ತಲೆನೋವಾಗಿ ಪರಿಣಮಿಸುವುದುಂಟು. ಮನೆಗೆಲಸ, ಮಗುವಿನ ಕಿರಿ ಕಿರಿ ಮತ್ತು ಮನೆಯ ಇತರ ವಾತಾವರಣದಿಂದ ಬೇಸರ

ಗೊಂಡ ತಾಯಿ, ಮಗುವಿನ ಮೇಲೆ ರೇಗುವುದು, ಹೊಡೆಯುವುದು ಸ್ವಾಭಾವಿಕ. ಇದೆಲ್ಲದರ ಪರಿಣಾಮವನ್ನು ಯಾರೂ ಊಹಿಸಬಹುದು. ಇಂತಹ ಸಂದರ್ಭಗಳಲ್ಲಿಯೂ ಸಹ ಪತಿ, ಸಾಧ್ಯವಾದ ಮಟ್ಟಿಗೆ ಮಕ್ಕಳನ್ನು ನೋಡಿಕೊಳ್ಳುವುದು ಮತ್ತು ಆಟವಾಡಿಸುವುದರ ಮೂಲಕ ಪತ್ನಿಗೆ ನೆರ ವಾಗಬಹುದು. ಇದರ ಪರಿಣಾಮವಾಗಿ, ಅಸಮಾಧಾನ, ಅಶಾಂತಿ ಮತ್ತು ಕಿರಿಕಿರಿಯ ಮನೆಯ ವಾತಾವರಣ ತಿಳಿಯಾಗಿ ಎಲ್ಲರಿಗೂ ನೆಮ್ಮದಿ ತಂದುಕೊಡಬಲ್ಲದು.

ಕೆಲವು ಮನೆಗಳಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಜನರು ಅಥವಾ ಮನೆಗೆಲಸ ಮಾಡಲೆಂದೇ ಕೆಲಸದವರೂ ಇರಬಹುದು. ಇಂತಹ ಸಂದರ್ಭ ಗಳಲ್ಲಿ ಪತ್ನಿಯಾದವಳಿಗೂ ಹೆಚ್ಚಿನ ಕೆಲಸವಿಲ್ಲದೇ ಇರಬಹುದು. ಆದರೆ ಈ ಸೌಲಭ್ಯಗಳನ್ನು ಹೊಂದಿರದ ಕುಟುಂಬಗಳೂ ಸಾಕಷ್ಟು ಸಂಖ್ಯೆಯಲ್ಲಿ ಇವೆ. ಮಧ್ಯಮ ವರ್ಗದ ಮತ್ತು ಬಡವರ್ಗದ ಕುಟುಂಬಗಳೇ ಹೆಚ್ಚಿನ ಸಂಖ್ಯೆಯಲ್ಲಿರುವುದರಿಂದ, ಅಂತಹ ಕುಟುಂಬಗಳಲ್ಲಿ ಮಾಡಬೇಕಾದ ಮನೆ ಗೆಲಸ ಮೈಮುರಿಯುವಷ್ಟು ಇರುತ್ತದೆ. ಪತಿಯೂ ಪಾಲ್ಗೊಳ್ಳಬಹು ದಾದ ಮತ್ತು ನೆರವನ್ನು ನೀಡಬಹುದಾದ ಅವಕಾಶವೂ ಸಾಕಷ್ಟು ಇರುತ್ತದೆ.

ಒಟ್ಟಿನಲ್ಲಿ ಮನೆಯ ದಿನನಿತ್ಯದ ಚಟುವಟಿಕೆಗಳಲ್ಲಿ ಎಷ್ಟರ ಮಟ್ಟಿಗೆ, ಯಾವ ರೀತಿಯಲ್ಲಿ ತಾನು ಭಾಗವಹಿಸಬಹುದು ಎನ್ನುವುದನ್ನು ಪರಿಸ್ಥಿತಿಗೆ ಅನುಗುಣವಾಗಿ ನಿರ್ಧರಿಸಬೇಕಾಗುತ್ತದೆ. ಈ ರೀತಿಯ ಪಾಲ್ಗೊಳ್ಳುವಿಕೆ ಪತ್ನಿಗೆ ದೈಹಿಕ ಶ್ರಮವನ್ನು ಕಡಿಮೆಗೊಳಿಸುವುದರ ಜೊತೆಯಲ್ಲಿ, ಮಾನಸಿಕವಾಗಿ ಪತಿ-ಪತ್ನಿಯರಿಬ್ಬರಲ್ಲಿಯೂ ಒಂದು ಬಗೆಯ ತೃಪ್ತಿಯನ್ನು ತಂದುಕೊಡುತ್ತದೆ. ಇದು ಪರಸ್ಪರ ಹೊಂದಾಣಿಕೆಗೆ, ಅರ್ಥ ಮಾಡಿಕೊಳ್ಳುವಿಕೆಗೆ ಹೆಚ್ಚು ಸಹಕಾರಿಯೆನಿಸುತ್ತದೆ.

ಅನೇಕ ಮನೆಗಳಲ್ಲಿ ಪತಿ ಇಂತಹ ನೆರವನ್ನು ಈಗಾಗಲೇ ಕೊಡುತ್ತಿರಲೂಬಹುದು. ಇನ್ನು ಹಲವು ಮನೆಗಳಲ್ಲಿ ಹೊರಗಡೆಯವರಿಗೆ ಗೊತ್ತಾಗದಂತೆ, ಗೋಪ್ಯವೆನ್ನುವ ರೀತಿಯಲ್ಲಿ ನೆರವು ನಡೆಯುತ್ತಿರಬಹುದು.

ಗೋಪ್ಯವಾಗಿಯೇ ಇರಲಿ ಅಥವಾ ಮರೆಮಾಚುವ ಪ್ರಯತ್ನವಿಲ್ಲದೆಯೇ ಇರಲಿ, ಮನೆಗೆಲಸದಲ್ಲಿ ನೆರವು ಕೊಡುತ್ತಿದ್ದರೆ ತಪ್ಪೇನು ಇಲ್ಲ. ಇತರರಿಗೆ ಗೊತ್ತಾದರೂ ತಪ್ಪಿಲ್ಲ. ನಮ್ಮ ಮನೆಯ ಕೆಲಸ, ನಮ್ಮ ಸಂಸಾರ, ನಮ್ಮದಿಯಿಂದಿರಲು ನೆರವಾಗುವುದರಲ್ಲಿ ತಪ್ಪೇನಿದೆ ? ಸಂಸಾರದ ಕಷ್ಟಗಳಲ್ಲಿ ಹೊರಗಿನವರಾರೂ ನೆರವಾಗುವುದಿಲ್ಲ ಮತ್ತು ಸಂಸಾರದಲ್ಲಿ ಒಡಕು ತಲೆದೋರಿದಾಗ ನಗುವವರಿಗೂ ಕೊರತೆಯಿಲ್ಲ. ಅಂದಮೇಲೆ ಹೊರಗಿನವರನ್ನು ಮೆಚ್ಚಿಸುವುದಕ್ಕೆ ಮಾಡುವಂತಹ ಅಥವಾ ಮಾಡದೇ ಇರುವಂತಹ ಕರ್ತವ್ಯವಲ್ಲ ಇದು. ನಮ್ಮ ಸಂಸಾರದ ಆವಶ್ಯಕತೆ ಮತ್ತು ನೆಮ್ಮದಿಗಳಿಗೆ ಅನುಗುಣವಾಗಿ, ಸ್ವಯಂ ಪ್ರೇರಿತರಾಗಿ ನಿರ್ವಹಿಸಬೇಕಾದ ಕರ್ತವ್ಯ, ಕೊಡಬೇಕಾದಂತಹ ನೆರವು ಇದು.

# ಆರೋಗ್ಯ ಭಾಗ್ಯ

ಆರೋಗ್ಯ ಭಾಗ್ಯವೇ ಮಹಾಭಾಗ್ಯ ಎಂದು ಹೇಳುವುದುಂಟು. ಒಂದು ಕುಟುಂಬದ ಸುಖ ಸಂತೋಷ ಅಲ್ಲಿನ ಸದಸ್ಯರುಗಳ ಆರೋಗ್ಯ ವನ್ನು ಅವಲಂಬಿಸಿರುತ್ತದೆ ಎನ್ನುವುದೂ ಸರ್ವವೇದ್ಯ. ಕುಟುಂಬದ ಜನರ ಆರೋಗ್ಯದ ದೃಷ್ಟಿಯಿಂದ ಪೌಷ್ಟಿಕ ಅಂಶಗಳ ಆಹಾರ ಸೇವನೆ, ನೈರ್ಮಲ್ಯ ನಿಯಮಗಳ ಪಾಲನೆ ಆವಶ್ಯಕ. ಇದಕ್ಕೆಲ್ಲ ಹಣದ ಆವಶ್ಯ ಕತೆಯೂ ಇದೆ. ಒಂದು ಕುಟುಂಬದ ಆರೋಗ್ಯದಲ್ಲಿ ಬಹಳ ಮಟ್ಟಿಗೆ ಕುಟುಂಬದ ಆದಾಯ ಪ್ರಮುಖ ಪಾತ್ರ ವಹಿಸುತ್ತದೆ ಎನ್ನುವುದು ನಿಜ. ಆದರೆ ಎಲ್ಲ ಕುಟುಂಬಗಳ ಆದಾಯವೂ ಒಂದೇ ಆಗಿರುವುದಿಲ್ಲ. ಆದ್ದರಿಂದ ಎಲ್ಲವರ್ಗದ ಜನರೂ, ಬೆಲೆ ಏರಿಕೆಯ ಈ ಕಾಲದಲ್ಲಿ ಪೌಷ್ಟಿಕ ಆಹಾರವನ್ನು ಸೇವಿಸಲು ಸಾಧ್ಯವೆ ಎಂಬ ಪ್ರಶ್ನೆ ಮೂಡುವುದೂ ಸಹಜ.

ಆದರೆ ಜಾಣ್ಮೆ, ದೃಢ ನಿರ್ಧಾರ ಮತ್ತು ಸೂಕ್ತ ಕ್ರಮಗಳ ಮೂಲಕ, ಕಡಿಮೆ ಆದಾಯದ ಕುಟುಂಬಗಳೂ ಸಹ ತಮ್ಮ ಆರೋಗ್ಯ ವನ್ನು ಸುಧಾರಿಸಿಕೊಳ್ಳಬಹುದು. ಕುಟುಂಬದ ಆದಾಯವನ್ನು ಖರ್ಚು ಮಾಡುವಲ್ಲಿ ಯಾವ ಯಾವ ಆವಶ್ಯಕತೆಗಳಿಗೆ ಪ್ರಾಧಾನ್ಯತೆಯನ್ನು ಕೊಡ ಬೇಕು ಎನ್ನುವಲ್ಲಿ ಸ್ವಲ್ಪ ಚಿಂತನೆ ಮಾಡಬೇಕು. ಅನವಶ್ಯಕ ಅಥವಾ ಅಷ್ಟೊಂದು ಮುಖ್ಯವಲ್ಲದ ವಿಷಯಗಳಿಗೆ ಕಡಿಮೆ ಮಹತ್ವವನ್ನು ಕೊಡುವ ಮೂಲಕ ಆದಾಯದ ಸಮರ್ಪಕ ವಿತರಣೆಯನ್ನು ಸಾಧಿಸ ಬಹುದು. ಸಿಗರೇಟು ಅಥವಾ ಬೀಡಿಯ ಸೇವನೆ ಅತಿ ಬಡವರ್ಗದ ಜನರಲ್ಲಿಯೂ ವ್ಯಾಪಕವಾಗಿ ಕಂಡುಬರುತ್ತದೆ. ಇವುಗಳ ಸೇವನೆಗೆ ಖರ್ಚು ತಗಲುವುದರ ಜೊತೆಗೆ, ಸೇವನೆಯಿಂದ ಆರೋಗ್ಯದ ಮೇಲೂ ದುಷ್ಪರಿಣಾಮ ಉಂಟಾಗುತ್ತದೆ. ಅಂದರೆ ಹಣ ಕೊಟ್ಟು ಆರೋಗ್ಯ ಕೆಡಿಸಿಕೊಂಡಂತಾಯಿತು. ಈ ಚಟವನ್ನು ನಿಲ್ಲಿಸುವ ಮೂಲಕ ಉಳಿಸ ಬಹುದಾದ ಹಣವನ್ನು ಆಹಾರಕ್ಕೋಸ್ಕರ ಖರ್ಚು ಮಾಡಬಹುದಲ್ಲವೆ? ದಿನಕ್ಕೆ ಕನಿಷ್ಠ ಒಂದು ಕಟ್ಟು ಬೀಡಿಯನ್ನು ಸೇದುವ ಬಡ ಕುಟುಂಬ

ವೊಂದರ ವ್ಯಕ್ತಿ ಮನಸ್ಸು ಮಾಡಿದರೆ,ಒಂದು ಕಟ್ಟು ಬೀಡಿಯ ಬೆಲೆಯಾದ ಸುಮಾರು ಪೈಸೆಯನ್ನು ದಿನಕ್ಕೆ ಉಳಿಸಬಲ್ಲ. ಈ ಪೈಸೆಯನ್ನು ತರಕಾರಿ ಗೋಸ್ಕರ ಉಪಯೋಗಿಸುತ್ತಾ ಬಂದರೆ ಕುಟುಂಬದ ಆರೋಗ್ಯ ಕ್ರಮೇಣ ಸುಧಾರಿಸಲಾರದೆ ? ಇದು ಒಂದು ಅತಿ ಸಣ್ಣ ಉದಾಹರಣೆಯಷ್ಟೆ. ಮನೆಯ ಖರ್ಚಿಗೆ ಹಣವಿಲ್ಲದಿದ್ದರೂ ಪ್ರದರ್ಶನವಾಗುವ ಎಲ್ಲ ಚಲನ ಚಿತ್ರವನ್ನೂ ನೋಡಬೇಕೆಂಬ ಸಿನಿಮಾ ಚಟ, ಮದ್ಯಪಾನದ ಚಟ, ಹೀಗೆ ಹಲವು ಖರ್ಚಿನ ಹವ್ಯಾಸಗಳು ಬಡ ಸಂಸಾರಗಳ ಮೇಲೆ ಕೆಟ್ಟ ಪ್ರಭಾವ ವನ್ನು ಬೀರುತ್ತವೆ. ಇಂತಹ ಚಟಗಳನ್ನು ಕ್ರಮೇಣ ನಿಲ್ಲಿಸಿ, ಹಣ ಉಳಿಸಲು ಸಾಧ್ಯವಿಲ್ಲವೆ ? ಕುಟುಂಬದ ಹಿರಿಯರು ಜಾಣ್ಮೆಯಿಂದ ಹಣ ವನ್ನು ಉಳಿಸುವ ಅಥವಾ ವಿತರಣೆಯ ಮೂಲಕ ಆರೋಗ್ಯಕ್ಕೆ ಅವಶ್ಯ ವಾದ ಉತ್ತಮ ಆಹಾರ ಸೇವನೆಯಲ್ಲಿ ತೊಡಗಬಹುದು.

## ಪೌಷ್ಟಿಕ ಆಹಾರ

ಪೌಷ್ಟಿಕ ಆಹಾರ ಸೇವನೆ ಉತ್ತಮ ಆರೋಗ್ಯ ಪಾಲನೆಗೆ ಅವಶ್ಯಕ. ಪೌಷ್ಟಿಕ ಅಂಶದ ಆಹಾರ ಸೇವನೆಗೆ ಹೆಚ್ಚಿನ ಹಣವೇ ಮುಖ್ಯವಲ್ಲ; ಆಹಾರ ಪದಾರ್ಥಗಳ ಬಗೆಗೆ ಸಾಮಾನ್ಯ ತಿಳಿವಳಿಕೆ ಮುಖ್ಯ. ನಾವು ದಿನನಿತ್ಯ ಬಳಸುವ ತರಕಾರಿಗಳು, ಸೊಪ್ಪು, ಧಾನ್ಯಗಳು ಮತ್ತಿತರ ಆಹಾರ ಪದಾರ್ಥಗಳಲ್ಲಿ ಯಾವುದರಲ್ಲಿ ಎಷ್ಟು ಪೌಷ್ಟಿಕ ಅಂಶವಿದೆ, ದೇಹಕ್ಕೆ ಅದರ ಆವಶ್ಯಕತೆ ಎಷ್ಟು ಎನ್ನುವುದರ ತಿಳಿವಳಿಕೆ ಅವಶ್ಯಕ. ವಾಸ್ತವ ವಾಗಿ ನಾವು ಬಳಸುವ ದಿನನಿತ್ಯದ ಅನೇಕ ಆಹಾರ ಪದಾರ್ಥಗಳು ಸಾಕಷ್ಟು ಪೌಷ್ಟಿಕ ಅಂಶಗಳಿಂದ ಕೂಡಿವೆ. ಆದರೆ ಸುಲಭವಾಗಿ ದೊರೆಯುವ ತರಕಾರಿ ಸೊಪ್ಪುಗಳನ್ನು ಧಾರಾಳವಾಗಿ ಬಳಸದ ಮತ್ತು ರಾಗಿ, ಜೋಳ, ಅಕ್ಕಿ ಯಾವುದಾದರೂ ಒಂದು ಧಾನ್ಯವನ್ನೇ ಎಲ್ಲದಕ್ಕೂ ಬಳಸುವ ಅಭ್ಯಾಸವೂ ಸಾಮಾನ್ಯತರವಾದುದು. ಶರೀರದ ಉತ್ತಮ ಬೆಳವಣಿಗೆಗೆ ಅವಶ್ಯವಾದ ಪೌಷ್ಟಿಕ ಅಂಶಗಳನ್ನು ಒಳಗೊಂಡ ಆಹಾರ ಪದಾರ್ಥ ಗಳನ್ನು ಸಮತೋಲನವಾಗಿ ಉಪಯೋಗಿಸುವುದು ಅತಿ ಮುಖ್ಯ. ಅಂತೆಯೆ ಈ ವಿಷಯಗಳಿಗೆ ಸಂಬಂಧಪಟ್ಟ ಪುಸ್ತಕಗಳು ಮತ್ತು ಪತ್ರಿಕೆ

ಗಳನ್ನು ಅಭ್ಯಾಸ ಮಾಡುವುದರಿಂದ ದೇಹಕ್ಕೆ ಹೆಚ್ಚು ಉಪಯುಕ್ತ ಆಹಾರ ಪದಾರ್ಥಗಳಾವುವು ಎನ್ನುವುದನ್ನು ತಿಳಿಯಬಹುದು. (ಇದೇ ಪುಸ್ತಕದ 'ಕುಟುಂಬ ಕಲ್ಯಾಣ' ಎಂಬ ಅಧ್ಯಾಯದಲ್ಲಿ, ಕನ್ನಡದಲ್ಲಿ ಲಭ್ಯವಿರುವ ಒಂದೆರಡು ಪುಸ್ತಕಗಳ ಹೆಸರನ್ನು ಸೂಚಿಸಲಾಗಿದೆ). ಒಟ್ಟಿನಲ್ಲಿ ಪೌಷ್ಟಿಕ ಅಂಶಗಳ ಆಹಾರ ಸೇವನೆಯ ಬಗೆಗೆ ಮನೆಯಲ್ಲಿ ಎಚ್ಚರಿಕೆ ವಹಿಸಬೇಕು. ಪತ್ನಿಗೂ ಈ ವಿಚಾರಗಳ ಬಗೆಗೆ ತಿಳಿವಳಿಕೆಯನ್ನು ಕೊಡುವುದು ಆವಶ್ಯಕ. ಇದು ಪತಿಯ ಜವಾಬ್ದಾರಿಯೂ ಹೌದು.

## ಪತ್ನಿಯ ಆರೋಗ್ಯ

ಪತ್ನಿ, ಕುಟುಂಬದ ಆಶೋತ್ತರ್ಯ, ಆವಶ್ಯಕತೆಗಳನ್ನು ಪೂರೈಸುವ ಪ್ರಮುಖ ವ್ಯಕ್ತಿ. ಆದರೆ ಆಕೆಯೇ ಅನಾರೋಗ್ಯದಿಂದ ನರಳುವಂತಾದಾಗ, ಕುಟುಂಬದಲ್ಲಿ ಒಂದು ಬಗೆಯ ಅವ್ಯವಸ್ಥೆ ತಲೆದೋರುತ್ತದೆ. ಆಕೆ ಆರೋಗ್ಯವಂತಳಾಗಿದ್ದರೆ, ಅನೇಕ ಸಮಸ್ಯೆಗಳು ಬಗೆಹರಿದಂತೆಯೇ ಸರಿ. ಇದೆಲ್ಲದಕ್ಕೂ ಹೆಚ್ಚಿನದಾಗಿ, ಕುಟುಂಬದಲ್ಲಿ ಮುಂದೆ ಹುಟ್ಟಲಿರುವ ಮಕ್ಕಳ ಆರೋಗ್ಯ, ತಾಯಿಯಾಗಲಿರುವ ಪತ್ನಿಯ ಆರೋಗ್ಯವನ್ನು ಅವ ಲಂಬಿಸಿರುತ್ತದೆ. ತಾಯಿಯಾಗಲಿರುವ ಸ್ತ್ರೀ ಆರೋಗ್ಯವಂತಳಾಗಿರುವಷ್ಟರ ಮಟ್ಟಿಗೆ ಮಕ್ಕಳೂ ಆರೋಗ್ಯವಂತರಾಗಿರುತ್ತಾರೆ ಎನ್ನುವುದೂ ಗೊತ್ತಿರುವ ವಿಷಯ.

ಗರ್ಭಿಣಿ ಸ್ತ್ರೀಗೆ ಪೌಷ್ಟಿಕ ಅಂಶಗಳ ಆವಶ್ಯಕತೆ ಬಹಳವಾಗಿರುತ್ತದೆ. ಅಂತೆಯೇ ಹೆಚ್ಚು ಪೌಷ್ಟಿಕ ಆಹಾರವನ್ನು ಆಕೆ ಸೇವಿಸಬೇಕಾಗುತ್ತದೆ. ಅಲ್ಲದೆ ಈ ಅವಧಿಯಲ್ಲಿ ಹಲವು ಕಾರಣಗಳಿಂದಾಗಿ ಪದೇ ಪದೇ ವೈದ್ಯಕೀಯ ಪರೀಕ್ಷೆಯೂ ಆವಶ್ಯಕ. ತಾಯಿ–ಮಗು ಇಬ್ಬರ ಆರೋಗ್ಯದ ದೃಷ್ಟಿಯಿಂದ ಸೂಕ್ತ ಸಮಯಗಳಲ್ಲಿ ವೈದ್ಯರ ಸಲಹೆ ಮತ್ತು ವೈದ್ಯಕೀಯ ಸೌಲಭ್ಯಗಳನ್ನು ಒದಗಿಸುವ ಕಡೆಗೆ ಗಮನ ಆವಶ್ಯಕ. ಉದಾಸೀನ ಮಾಡದ ಮುನ್ನೆಚ್ಚರಿಕೆಯ ಕ್ರಮ ಅನೇಕ ಸಮಸ್ಯೆ ಮತ್ತು ದುರಂತಗಳನ್ನು ತಡೆಹಿಡಿಯಬಲ್ಲವು ಎನ್ನುವುದನ್ನು ಮರೆಯಲಾಗದು. ಈ ಸಂಬಂಧದಲ್ಲಿ,

ತಾಯಿಯಾಗಲಿರುವ ಪತ್ನಿಯ ದೈಹಿಕ ಆರೋಗ್ಯದಷ್ಟೇ ಅವಳ ಮಾನಸಿಕ ಆರೋಗ್ಯವೂ ಮುಖ್ಯ ಎನ್ನುವುದನ್ನು ಮನಗಂಡಾಗ, ಮಾನಸಿಕ ನೆಮ್ಮದಿಗೆ ಸೂಕ್ತ ವಾತಾವರಣವನ್ನು ನಿರ್ಮಿಸಬೇಕಾದ ಆವಶ್ಯಕತೆ ಸ್ಪಷ್ಟವೆನಿಸುತ್ತದೆ. ಮನೆಯಲ್ಲಿರುವ ಇತರರ ಮತ್ತು ಪತ್ನಿಯ ಆರೋಗ್ಯಕರ ಸ್ಥಿತಿಗೆ ಪ್ರಮುಖವಾಗಿ ಪತಿಯೇ ಕಾರಣನೆನಿಸುತ್ತಾನೆ. ಅಂತೆಯೆ ಆತನ ಹೊಣೆ ಇಲ್ಲಿ ಹೆಚ್ಚು.

## ಮಕ್ಕಳ ಆರೋಗ್ಯ

ಇಂದು ನಾವು ಆರೋಗ್ಯವಂತರಾಗಿದ್ದರೆ, ಮುಖದಲ್ಲಿ ಸಿಡುಬಿನ ಕಲೆಗಳಿಲ್ಲದಿದ್ದರೆ, ಕಣ್ಣುಗಳು ಚೆನ್ನಾಗಿ ಕಾಣಿಸುತ್ತಿದ್ದರೆ, ಅದಕ್ಕೆ ನಮ್ಮನ್ನು ಸಾಕಿ ಸಲಹಿದ ತಂದೆ ತಾಯಿಗಳ ಅಥವಾ ಪೋಷಕರ ಮುನ್ನೆಚ್ಚರಿಕೆಯ ಕ್ರಮ ಕಾರಣ. ಇಂದು ನಮ್ಮ ಮುಖದಲ್ಲಿ ಅಸಹ್ಯವೆನಿಸುವ ಸಿಡುಬಿನ ಕಲೆಗಳು ತಂಬಿದ್ದರೆ, ಕಣ್ಣುಗಳು ಚೆನ್ನಾಗಿ ಕಾಣಿಸದೇ ಇದ್ದರೆ, ಇತರ ದೈಹಿಕ ನ್ಯೂನತೆಗಳು ಇದ್ದರೆ, ಇದಕ್ಕೂ ಸಹ ನಮ್ಮ ತಂದೆ ತಾಯಿ ಅಥವಾ ಪೋಷಕರ ಜವಾಬ್ದಾರಿರಹಿತ, ಸೂಕ್ತ ಸಮಯದಲ್ಲಿ ಮುನ್ನೆಚ್ಚರಿಕೆಯ ಕ್ರಮವನ್ನು ಕೈಗೊಳ್ಳದ ವರ್ತನೆ ಕಾರಣವಿರಬಹುದು. ತಂದೆಯಾಗಲಿರುವ ಅಥವಾ ತಂದೆಯೆನಿಸಿಕೊಂಡಿರುವವರ ಜವಾಬ್ದಾರಿಯುತ ಅಥವಾ ಜವಾಬ್ದಾರಿರಹಿತ ವರ್ತನೆ ಮತ್ತು ಮಕ್ಕಳನ್ನು ಬೆಳೆಸುವ ಕ್ರಮವನ್ನು ಅವಲಂಬಿಸಿ, ನಮ್ಮ ಮುಂದಿನ ಮಕ್ಕಳು ಸುಖ ಜೀವನ ಅಥವಾ ಹಲವು ತೊಂದರೆಗಳನ್ನು ಅನುಭವಿಸುತ್ತಾರೆ. ಹಿರಿಯರ ನಿರ್ಲಕ್ಷ್ಯ ವರ್ತನೆಗೆ ಮುಂದಿನ ಜನಾಂಗ ಬೆಲೆ ತೆರಬೇಕಾಗುತ್ತದೆ. ಯಾವ ತಂದೆ ತಾಯಿಗಳು ತಾನೇ ತಮ್ಮ ಮಕ್ಕಳು ಅನಾರೋಗ್ಯದಿಂದಿರಲಿ ಅಥವಾ ಹಲವು ರೀತಿಯ ತೊಂದರೆಗಳಿಗೆ ಒಳಗಾಗಲಿ ಎಂದು ಇಚ್ಛೆ ಪಡುತ್ತಾರೆ ? ಆದರೆ ಮಕ್ಕಳ ಆರೋಗ್ಯ ಮತ್ತು ಸುಖ ಜೀವನಕ್ಕೆ, ವಾತ್ಸಲ್ಯದ ಹಾರೈಕೆಯೊಂದೇ ಸಾಲದು; ಸೂಕ್ತ ಮುನ್ನೆಚ್ಚರಿಕೆ ಮತ್ತು ಆಯಾ ಸಂದರ್ಭಗಳಲ್ಲಿ ಆಗಬೇಕಾದ ಚಿಕಿತ್ಸೆ ಅತ್ಯಂತ ಮುಖ್ಯ.

## ಚುಚ್ಚು ಮದ್ದುಗಳು

ಮಕ್ಕಳ ಆರೋಗ್ಯದ ಮೇಲೆ ಹೆಚ್ಚಿನ ಜಾಗೃತಿಯನ್ನು ಇರಿಸಿ
ಕೊಂಡಿರಬೇಕು. ಚಿಕ್ಕ ವಯಸ್ಸಿನಲ್ಲಿ ಸೂಕ್ತ ಸಮಯಗಳಲ್ಲಿ ಕೈಗೊಳ್ಳುವ
ಮುನ್ನೆಚ್ಚರಿಕೆಯ ಕ್ರಮಗಳು ಮತ್ತು ಚಿಕಿತ್ಸೆಗಳು ಮುಂದಿನ ದಿನಗಳಲ್ಲಿ
ಆರೋಗ್ಯ ಜೀವನಕ್ಕೆ ಭದ್ರ ಬುನಾದಿ ಇದ್ದಂತೆ. ತಾಯಿಯಾದವಳು
ಮನೆಯ ನಾನಾ ಕಾರ್ಯಗಳಲ್ಲಿ ತೊಡಗಿರುವುದರಿಂದ ಮಕ್ಕಳ ಮೇಲೆ
ಪೂರ್ಣ ಗಮನವನ್ನು ಇಟ್ಟುಕೊಂಡಿರುವುದು ಕಷ್ಟವೇ ಆಗುತ್ತದೆ.
ಅಂತೆಯೆ, ತಂದೆಯಾದ ವ್ಯಕ್ತಿ ಮಕ್ಕಳ ಆರೋಗ್ಯದ ಕಡೆ ಹೆಚ್ಚು ಗಮನ
ವನ್ನು ಇಟ್ಟುಕೊಂಡಿರಬೇಕಾಗುತ್ತದೆ.

ಮಕ್ಕಳ ಆರೋಗ್ಯವನ್ನು ಕಾಪಾಡಲು ಮೊದಲು ಕೈಗೊಳ್ಳಬಹು
ದಾದ ಕಾರ್ಯವೆಂದರೆ, ರೋಗ ನಿರೋಧಕ ಚುಚ್ಚು ಮದ್ದುಗಳನ್ನು
ಕೊಡಿಸುವುದು. ಸಾಮಾನ್ಯವಾಗಿ ಮಕ್ಕಳಲ್ಲಿ ತಲೆದೋರಬಹುದಾದಂತಹ
ನಾನಾ ರೋಗಗಳನ್ನು ಸೂಕ್ತ ಔಷಧಿಗಳಿಂದ ತಡೆಗಟ್ಟಲು ಸಾಧ್ಯವಿದೆ.

ವೈದ್ಯಕೀಯ ವಿಜ್ಞಾನ ಈ ದಿಸೆಯಲ್ಲಿ ಸಾಕಷ್ಟು ಪ್ರಗತಿಯನ್ನು
ಸಾಧಿಸಿದೆ. ಸಿಡುಬು, ದಡಾರ, ಸೆಳವು, ಪೋಲಿಯೋ ಇತ್ಯಾದಿ ರೋಗ
ಗಳು ಮಕ್ಕಳ ಮೇಲೆ ಶಾಶ್ವತ ಹಾನಿಯನ್ನುಂಟು ಮಾಡುತ್ತವೆ. ಇವುಗಳ
ತಡೆಗಟ್ಟುವಿಕೆಗೆ ಸಂಬಂಧಪಟ್ಟ ಚುಚ್ಚುಮದ್ದುಗಳನ್ನು ಕೊಡಿಸಬೇಕಾಗುತ್ತದೆ.
ಮುದ್ದಾದ ಮಗು, ಆದರೆ ಪೋಲಿಯೋ ಹೊಡೆತದಿಂದಾಗಿ ಕಾಲುಗಳು
ನಿಷ್ಕ್ರಿಯವಾಗಿದ್ದು, ಅವುಗಳನ್ನು ಎಳೆದುಕೊಂಡು ಕುಂಟುತ್ತಾ ಸಾಗುವ
ದೃಶ್ಯ, ಅಥವಾ ಮದುವೆಯ ವಯಸ್ಸಿಗೆ ಬಂದ ಯುವತಿ, ಆದರೆ ಮುಖದ
ತುಂಬ ದಡಾರದ ದೊಡ್ಡ ದೊಡ್ಡ ಕಲೆಗಳು, ಇಂತಹ ದೃಶ್ಯಗಳನ್ನು
ನೋಡಿದ ಎಲ್ಲ ಪೋಷಕರೂ ಸಹ, ತಮ್ಮ ಮಕ್ಕಳಿಗೆ ಆ ರೀತಿ ಆಗದಿರ
ಎಂದು ಹಾರೈಸುವುದು ಸಹಜ. ಈ ಹಾರೈಕೆ ನೆರವಾಗಬೇಕಾದಲ್ಲಿ ಮುನ್ನೆ
ಚ್ಚರಿಕೆಯ ಕ್ರಮ ಅಗತ್ಯ. ಅಲ್ಲದೆ ಮಕ್ಕಳಲ್ಲಿ ಸಾಧಾರಣವಾಗಿ ಕಾಣಿ
ಕೊಳ್ಳುವಂತಹ ಇನ್ನೂ ಹಲವು ರೋಗಗಳನ್ನು ತಡೆಗಟ್ಟಬಹುದು

ಂತೆಯೆ, ತಂದೆ ಇಲ್ಲಿ ಹೆಚ್ಚು ಜಾಗೃತನಾಗಿರಬೇಕಾದ ಆವಶ್ಯಕತೆ ಇದೆ. ಗುವಿನ ಯಾವ ಯಾವ ವಯಸ್ಸಿನಲ್ಲಿ ಎಂತಹ ಚುಚ್ಚು ಮದ್ದನ್ನು ಕೊಡಿಸಬೇಕು, ಅದರಿಂದ ಯಾವ ರೋಗಗಳನ್ನು ತಡೆಗಟ್ಟಬಹುದು ಎನ್ನುವ ವಿಷಯದ ಬಗೆಗೆ ವೈದ್ಯರಲ್ಲಿ ವಿಚಾರಿಸಿ, ಅದರಂತೆಯೆ ನಡೆದು ಕೊಳ್ಳಬೇಕು. ಬಿ. ಸಿ. ಜಿ., ಟ್ರಿಪಲ್ ಆಂಟಿಜೆರ್ಜ್, ಪೋಲಿಯೋ ಡ್ರಾಪ್ಸ್, ಇನ್ನಿತರ ಚುಚ್ಚುಮದ್ದುಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಕೊಡಿಸಬೇಕು. ಇವುಗಳಲ್ಲಿ ಕೆಲವನ್ನು ಹಲವು ವರ್ಷಗಳ ಅಂತರದ ನಂತರ ಎರಡನೆಯ ಮತ್ತು ಮೂರನೆಯ ಬಾರಿ ಕೊಡಿಸಬೇಕಾಗುತ್ತದೆ. ಯಾವ ಮಗುವಿಗೆ ಯಾವ ವಯಸ್ಸಿನಲ್ಲಿ ಯಾವ ಮದ್ದನ್ನು ಕೊಡಿಸಲಾಗಿತ್ತು, ಮುಂದೆ ಯಾವ ವಯಸ್ಸಿನಲ್ಲಿ ಯಾವ ಮದ್ದನ್ನು ಕೊಡಿಸಬೇಕು ಎನ್ನುವ ಬಗೆಗೆ ಈ ಉದ್ದೇಶಕ್ಕಾಗಿಯೇ ಒಂದು ಸಣ್ಣ ಪುಸ್ತಕದಲ್ಲಿ ಬರೆದುಕೊಂಡು ಅದನ್ನು ಅನುಸರಿಸುವ ವಿಧಾನ ಉತ್ತಮ. ಇಂತಹ ಕ್ರಮ, ಜ್ಞಾಪಕ ಶಕ್ತಿಯನ್ನು ಸದಾ ಅವಲಂಬಿಸಬೇಕಾದ ಪರಿಸ್ಥಿತಿಯನ್ನು ತಪ್ಪಿಸುತ್ತದೆ. ಇಂತಹ ವಿಷಯಗಳ ಬಗೆಗೆ ಇಷ್ಟೆಲ್ಲಾ ತಲೆ ಕೆಡಿಸಿಕೊಳ್ಳಬೇಕಾದ ಆವಶ್ಯಕತೆಯಿದೆಯೆ ಎಂದೂ ಹಲವರು ಕೇಳಬಹುದು. ಭಯಂಕರ ರೋಗಗಳನ್ನು ತಡೆಗಟ್ಟುವ ಮೂಲಕ, ಮಕ್ಕಳ ಆರೋಗ್ಯಕ್ಕೆ ಭದ್ರ ಬುನಾದಿಯನ್ನು ಹಾಕುವ ಈ ವ್ಯವಸ್ಥೆಯನ್ನು ತೀವ್ರವಾಗಿ ಪರಿಶೀಲಿಸಿದಾಗ, ಇಷ್ಟೆಲ್ಲ ಮುಂಜಾಗ್ರತೆ ಆವಶ್ಯವೆನ್ನುವುದು ಸ್ಪಷ್ಟವಾಗುತ್ತದೆ.

## ಚೊಕ್ಕಟತನ

ಮಕ್ಕಳಿಗೆ ಕ್ರಮೇಣ ನೈರ್ಮಲ್ಯ ನಿಯಮಗಳನ್ನು ಬೋಧಿಸುವುದು ಆವಶ್ಯಕ. ಶುಚಿಯಾಗಿರುವುದು, ತನಗೆ ಸಂಬಂಧಪಟ್ಟ ವಸ್ತುಗಳನ್ನು ಚೊಕ್ಕಟವಾಗಿಟ್ಟುಕೊಳ್ಳುವುದು ಮತ್ತು ಆರೋಗ್ಯದ ನಿಯಮಗಳನ್ನು ಪಾಲಿಸುವುದನ್ನು ಕಲಿಸಬೇಕು. ನೆಲದ ಮೇಲೆ ಬಿದ್ದಿರುವಂತಹ ಅಥವಾ ಕೊಳಕು ಪ್ರದೇಶಗಳಲ್ಲಿ ಬಿದ್ದಿರುವಂತಹ ಪದಾರ್ಥಗಳನ್ನು ತಿನ್ನಬಾರದು, ಮನೆಯ ಹೊರಗಡೆ ಅನಾರೋಗ್ಯಕರ ಸ್ಥಳಗಳಲ್ಲಿ ಮತ್ತು ವಿಧಾನಗಳಲ್ಲಿ

ಮಾರುವಂತಹ ಪದಾರ್ಥಗಳನ್ನು ತಿನ್ನಬಾರದು, ಇತ್ಯಾದಿ ವಿಷಯಗಳ ಬಗ್ಗೆ ತಿಳಿವಳಿಕೆಯನ್ನು ಮೂಡಿಸಬೇಕಾಗುತ್ತದೆ. ಸ್ವಾಭಾವಿಕವಾಗಿ ಮಕ್ಕಳು ಸಿಹಿ ಪದಾರ್ಥಗಳನ್ನು ಹೆಚ್ಚು ತಿನ್ನುವುದುಂಟು. ಅಂತೆಯೆ ಹಲ್ಲುಗಳನ್ನು ನಿತ್ಯ ಉಜ್ಜಿ ಚೊಕ್ಕಟವಾಗಿಟ್ಟುಕೊಳ್ಳದೆ ಉದಾಸೀನ ಮಾಡಿದಲ್ಲಿ ಕ್ರಮೇಣ ಹಲ್ಲುಗಳಿಗೆ ಅಪಾಯ ತಟ್ಟುವ ಸಾಧ್ಯತೆ ಇದೆ. ಹೆಚ್ಚಿನ ಶೈತ್ಯ ಪದಾರ್ಥಗಳನ್ನು (ಐಸ್ ಕ್ಯಾಂಡಿ, ಐಸ್ ಕ್ರೀಂ ಇತ್ಯಾದಿ) ಅತಿಯಾಗಿ ತಿನ್ನುವ ಅಭ್ಯಾಸ ಬೆಳೆದರೂ ಸಹ ಹಲ್ಲುಗಳು ಹುಳುಕು ಆಗುವ ಸಾಧ್ಯತೆ ಇದೆ ಎಂದು ಹೇಳುವುದುಂಟು. ಆದ್ದರಿಂದ ಈ ಅಭ್ಯಾಸಗಳ ಬಗೆಗೆ ಮುನ್ನೆಚ್ಚರಿಕೆ ಆವಶ್ಯಕ.

ಮಕ್ಕಳ ಪೋಷಣೆಯನ್ನು ಜಾಗ್ರತವಾಗಿ ಗಮನಿಸುತ್ತಿರಬೇಕಾಗುತ್ತದೆ. ಸಣ್ಣ ಪುಟ್ಟ ರೀತಿಯ ಗಾಯ, ಕಾಯಿಲೆಗಳನ್ನು ನಿರ್ಲಕ್ಷಿಸುವುದೂ ಅಪಾಯಕಾರಿ. ಉದಾಸೀನದಿಂದಾಗಿ ಅನೇಕ ಸಂದರ್ಭಗಳಲ್ಲಿ ಅತಿ ಕ್ಷುಲ್ಲಕವೆನಿಸುವಂತಹ ಗಾಯ ಮತ್ತು ಕಾಯಿಲೆಗಳ ಚಿಹ್ನೆಗಳೂ ನಂತರ ಅಪಾಯಕ್ಕೆಡೆಮಾಡಿ ಕೊಡಬಹುದು. ಸೂಕ್ತ ಸಮಯದ ಅಂತರದಲ್ಲಿ ಮಕ್ಕಳ ವೈದ್ಯಕೀಯ ಪರೀಕ್ಷೆಯ ಮೂಲಕ ಮಕ್ಕಳ ಬೆಳವಣಿಗೆಯಲ್ಲಿರಬಹುದಾದ ಕೊರತೆಗಳನ್ನು ಗುರುತಿಸಬಹುದು. ಅಂತೆಯೆ ಸೂಕ್ತ ಔಷಧ ಅಥವಾ ಟಾನಿಕ್‌ನ ಆವಶ್ಯಕತೆ ಕಂಡುಬರುತ್ತದೆ. ಇವುಗಳನ್ನು ತಪ್ಪದೆ ಕ್ರಮಬದ್ಧವಾಗಿ ಮಕ್ಕಳಿಗೆ ಕೊಡುವುದೂ ಒಂದು ಜವಾಬ್ದಾರಿಯ ಕೆಲಸವೆನಿಸುತ್ತದೆ.

## ಅಪಾಯದ ವರ್ತನೆ — ಮುನ್ನೆಚ್ಚರಿಕೆ

ಮಕ್ಕಳ ಆರೋಗ್ಯದ ಮೇಲೆ ಇಷ್ಟೆಲ್ಲ ಎಚ್ಚರಿಕೆಯನ್ನು ವಹಿಸುವುದರ ಜೊತೆಗೆ, ಮಕ್ಕಳ ಚಟುವಟಿಕೆಗಳ ಮೇಲೂ ಹೆಚ್ಚಿನ ಗಮನವನ್ನು ಇಟ್ಟಿರಬೇಕಾಗುತ್ತದೆ. ಕಾರಣ, ಅನೇಕ ಸಂದರ್ಭಗಳಲ್ಲಿ ಆಕಸ್ಮಿಕ ಸನ್ನಿವೇಶಗಳಿಂದಾಗಿ ನಾನಾ ರೀತಿಯ ತೊಂದರೆಗೆ ಒಳಗಾಗುವ ಸಾಧ್ಯತೆಗಳು

ಕಂಡುಬರುತ್ತವೆ. ಮುಗ್ಧ ಮಕ್ಕಳಿಗೆ, ತಮ್ಮ ಯಾವ ಚಟುವಟಿಕೆಯಿಂದ ಏನು ಅನಾಹುತ ಅಥವಾ ತೊಂದರೆ ಸಂಭವಿಸಬಹುದು ಎನ್ನುವ ಅರಿವೂ ಇರುವುದಿಲ್ಲ. ಅಂತೆಯೆ ತಮ್ಮ ವಯಸ್ಸಿಗೆ ಸಹಜವಾದ ಚೇಷ್ಟೆ ಮತ್ತು ಆಟಗಳಲ್ಲಿ ತೊಡಗಿರುವುದೂ ಸ್ವಾಭಾವಿಕ. ಆದರೆ, ಪೋಷಕರು, ಸದಾ ಅವರ ಚಟುವಟಿಕೆಗಳನ್ನು ಗಮನಿಸುತ್ತಿರಬೇಕು. ಅಪಾಯಕ್ಕೀಡಾಗ ಬಹುದಾದ ವರ್ತನೆ ಅಥವಾ ಚಟುವಟಿಕೆಗಳಲ್ಲಿ ಮಕ್ಕಳು ತೊಡಗಿದ್ದಲ್ಲಿ ಮುನ್ನೆಚ್ಚರಿಕೆಯನ್ನು ಕೊಡಬೇಕಾಗುತ್ತದೆ, ಅಥವಾ ಮುನ್ನೆಚ್ಚರಿಕೆಯ ಕ್ರಮವನ್ನು ಕೈಗೊಳ್ಳುವ ಮೂಲಕ ಅನೇಕ ಅಪಾಯಗಳನ್ನು ತಪ್ಪಿಸ ಬಹುದು.

ಮಕ್ಕಳ ವಿಷಯದಲ್ಲಿ ಎಷ್ಟು ರೀತಿಯಲ್ಲಿ ಮುನ್ನೆಚ್ಚರಿಕೆಯನ್ನು ವಹಿಸಿದರೂ ಕಡಿಮೆಯೇ ಎನಿಸುತ್ತದೆ. ಅಪಾಯಕಾರಿ ವಸ್ತುಗಳೊಂದಿಗೆ ಆಟ ಅಥವಾ ಅಪಾಯಕಾರೀ ಸ್ಥಳಗಳಲ್ಲಿ ಆಟ ಇವುಗಳ ವಿಷಯದಲ್ಲಿ ಜಾಗ್ರತೆ ವಹಿಸಬೇಕಾದ ಆವಶ್ಯಕತೆಯಿದೆ. ಹಿರಿಯರು ಕಿವಿಗೆ ಕಡ್ಡಿ ಅಥವಾ ಪಿನ್ನನ್ನು ಉಪಯೋಗಿಸಿಕೊಂಡು ಗುಗ್ಗೆಯನ್ನು ತೆಗೆಯುವ ಅಭ್ಯಾಸವನ್ನು ಗಮನಿಸುವ ಮಕ್ಕಳು, ತಾವೂ ಅದೇ ರೀತಿ ತಮ್ಮ ಕಿವಿಗೆ ಕಡ್ಡಿಯನ್ನೋ ಅಥವಾ ಪಿನ್ನನ್ನೋ ಹಾಕಿಕೊಳ್ಳುವ ಸಾಧ್ಯತೆ ಇದೆ. ಇಂತಹ ಅಭ್ಯಾಸ ಅಪಾಯಕಾರಿ. ಕಾರಣ ಸ್ವಲ್ಪ ಅಚಾತುರ್ಯದಿಂದಾಗಿ ಕಿವಿಯೊಳಗಿನ ಸೂಕ್ಷ್ಮತರ ಪೊರೆಗೆ ಪೆಟ್ಟು ಬೀಳುವ ಸಂಭವವುಂಟು. ಅಂದಮೇಲೆ ಹಿರಿಯರು, ಮಕ್ಕಳಿಗೆ ತಿಳಿವಳಿಕೆ ಬರುವವರೆಗೆ ಅವರ ಎದುರಿ ನಲ್ಲಿ ಸಾಧ್ಯವಾದ ಮಟ್ಟಿಗೆ ಇಂತಹ ಅಭ್ಯಾಸಗಳನ್ನು ಕಡಿಮೆಗೊಳಿಸಬೇಕು. ಹಾಗೂ, ಮಕ್ಕಳು ಇಂತಹ ಅಭ್ಯಾಸದಲ್ಲಿ ನಿರತರಾಗಿರುವುದನ್ನು ಗಮನಿಸಿ ದಾಗ, ಸೂಕ್ತ ಎಚ್ಚರಿಕೆಯನ್ನು ಕೊಟ್ಟು, ಇದು ಅಪಾಯಕಾರಿ ಎನ್ನುವು ದನ್ನು ತಿಳಿಯಹೇಳಬೇಕು. ಇನ್ನು ಕೆಲವು ಸಂದರ್ಭಗಳಲ್ಲಿ ಆಟಕ್ಕೆ ವೈದ್ಯ ನೆಂಬ ನೆಪವಲ್ಲಿ ಮತ್ತೊಂದು ಮಗುವಿಗೆ ಚುಚ್ಚುವ, ಕುಯ್ಯುವ ಸಂದರ್ಭ ಗಳು ಕಂಡುಬರುತ್ತವೆ. ಅದೇ ರೀತಿ, ಆಟದ ಮತ್ತು ಸಿಟ್ಟಿನ ರಭಸದಲ್ಲಿ ಅಪಾಯಕಾರೀ ಸ್ಥಳಗಳಿಗೆ ಹೊಡೆಯುವ ಮತ್ತು ಹೊಡೆದಾಟದಲ್ಲಿ

ಅಪಾಯಕಾರೀ ಸಾಧನಗಳನ್ನು ಬಳಸುವ ಸಂದರ್ಭಗಳೂ ಕಂಡುಬರುತ್ತವೆ. ಇವುಗಳ ಬಗೆಗೆ ತಿಳಿವಳಿಕೆ ಮೂಡಿಸಬೇಕು.

ಮನೆಯಲ್ಲಿ ಇಬ್ಬರು ಅಥವಾ ಹೆಚ್ಚು ಮಕ್ಕಳು ಇದ್ದ ಪಕ್ಷದಲ್ಲಿ, ಮನೆಯ ತುಂಬ ಕೇಕೆ ಹಾಕಿಕೊಂಡು ರಭಸದಿಂದ ಓಡಾಡಿ ಆಟವಾಡುವುದು ಸಹಜ. ಇಂತಹ ಸಂದರ್ಭಗಳಲ್ಲಿ ಒಬ್ಬನು ಮತ್ತೊಬ್ಬನನ್ನು ಅಟ್ಟಿಸಿಕೊಂಡು ಓಡಾಡುವ, ಹಾಗೂ ಮೊದಲನೆಯವನು ತನ್ನ ಹಿಂದೆ ಬರುವವನಿಗೆ ಅಡ್ಡಿಯಾಗಲೆಂದು ತನ್ನ ಹಿಂದೆಯೇ ಬಾಗಿಲನ್ನು ಎಳೆದುಕೊಂಡು ಓಡುವ ಸಂದರ್ಭಗಳಿವೆ. ಇದರಿಂದ ಹಿಂದಿನವನು ಬಾಗಿಲಿಗೇ ಮುಖ ಹೊಡೆದುಕೊಳ್ಳುವ ಸಾಧ್ಯತೆ ಇದೆ. ಬಾಗಿಲು ಅಥವಾ ಗೇಟಿನ ಮೇಲೆ ಒಬ್ಬನು ನಿಂತು ಮತ್ತೊಬ್ಬ ಮಾತಾಡುವ ಸಂದರ್ಭಗಳಲ್ಲಿ, ಕೈ ಅಥವಾ ಕಾಲು ಬೆರಳುಗಳನ್ನು ಜಜ್ಜುವ ಪ್ರಕರಣಗಳು ಕಂಡುಬರುತ್ತವೆ.

ಹುಣಸೆ ಬೀಜ, ಬಟ್ಟೆಗೆ ಹಾಕುವ ಗುಂಡಿ ಮತ್ತು ಐದು ಅಥವಾ ಹತ್ತು ಪೈಸೆಯ ನಾಣ್ಯ ಇತ್ಯಾದಿಗಳನ್ನು ಬಾಯಿಯೊಳಗೆ ಹಾಕಿಕೊಂಡು ಆಟವಾಡುವುದು ಅಪಾಯಕಾರಿ. ಅದರಲ್ಲಿಯೂ ಮಲಗಿಕೊಂಡು ಆಟವಾಡುತ್ತಿರುವ ಸಂದರ್ಭದಲ್ಲಿ ಇಂತಹ ವಸ್ತುಗಳನ್ನು ಬಾಯಿಗೆ ಹಾಕಿಕೊಂಡಲ್ಲಿ ಅವು ಗಂಟಲಲ್ಲಿ ಸಿಕ್ಕಿ ಹಾಕಿಕೊಳ್ಳುವ ಸಾಧ್ಯತೆ ಇದೆ. ಬಳಪದ ಚೂರನ್ನು ಮೂಗು ಅಥವಾ ಕಿವಿಯಲ್ಲಿ ಹಾಕಿಕೊಂಡು ಆಟವಾಡುವುದು ಕಂಡುಬರುತ್ತದೆ. ಈ ಮಕ್ಕಳು ಆಟವಾಡುವಾಗ, ಕಿವಿ, ಮೂಗು ಮತ್ತು ಬಾಯಿಯೊಳಗೆ ಮೇಲೆ ತಿಳಿಸಿದಂತಹ ನಾನಾ ಪದಾರ್ಥಗಳನ್ನು ಹಾಕಿಕೊಳ್ಳದಂತೆ ಎಚ್ಚರಿಕೆ ಮತ್ತು ತಿಳಿವಳಿಕೆಯನ್ನು ಕೊಡಬೇಕು.

ಸಾಮಾನ್ಯವಾಗಿ ಐದು, ಹತ್ತು ಪೈಸೆ ನಾಣ್ಯಗಳನ್ನು ಬಾಯಿಗೆ ಹಾಕಿಕೊಂಡು ಆಟವಾಡುವಾಗ, ಅದು ಗಂಟಲಲ್ಲಿ ಸಿಕ್ಕಿ ಹಾಕಿಕೊಳ್ಳುವ ಸಾಧ್ಯತೆ ಒಂದೇ ಅಲ್ಲದೆ, ಅದು ಎಷ್ಟು ಅನಾರೋಗ್ಯಕಾರಿ ಎನ್ನುವುದನ್ನು ನಾವು ಮರೆಯಬಾರದು. ಚಿಲ್ಲರೆ ನಾಣ್ಯಗಳು ಎಲ್ಲೆಲ್ಲಿ ಸಂಚಾರ ಮಾಡಿಕೊಂಡು, ಎಷ್ಟೆಲ್ಲ ಕೊಳೆ, ರೋಗ ಹರಡುವ ಕ್ರಿಮಿಗಳಿಂದ ಕೂಡಿರುತ್ತವೆ

ಎನ್ನುವುದು, ಸೂಕ್ಷ್ಮವಾಗಿ ಈ ವಿಷಯವನ್ನು ಪರಿಶೀಲಿಸಿದಾಗ ಗೊತ್ತಾಗುತ್ತದೆ. ನಾನಾ ಅಂಟುರೋಗ, ಕುಷ್ಠ ಮತ್ತು ಭೀಕರ ಚರ್ಮರೋಗ ಇತ್ಯಾದಿಗಳಿಂದ ನರಳುತ್ತಿರುವ ಭಿಕ್ಷುಕರ ಸಂಪರ್ಕ ಮತ್ತು ಆ ಮೂಲಕ ರೋಗಿಗಳ ರಕ್ತ, ಕೀವುಗಳ ಸಂಪರ್ಕವನ್ನು ಪಡೆದಿರಬಹುದಾದ ಸಾಧ್ಯತೆಯೂ ಇದೆ. ಇಂತಹ ನಾಣ್ಯಗಳನ್ನು ಮಕ್ಕಳು ಬಾಯಲ್ಲಿಟ್ಟುಕೊಂಡು ಆಟ ವಾಡಬಹುದೆ ?

## ಔಷಧಿ ಮತ್ತು ಆಯುಧಗಳು

ಹಿರಿಯರು ಹೆಚ್ಚು ಜಾಗ್ರತೆ ವಹಿಸಲೇಬೇಕಾದ ಮತ್ತೊಂದು ವಿಷಯವೆಂದರೆ ಅಪಾಯಕಾರಿ ಔಷಧಿ ಮತ್ತು ಆಯುಧಗಳು ಮಕ್ಕಳಿಗೆ ಸಿಗದಂತೆ ನೋಡಿಕೊಳ್ಳುವುದು. ತೀವ್ರ ಪ್ರತಿಕ್ರಿಯೆಯನ್ನು ಉಂಟು ಮಾಡುವಂತಹ ಮತ್ತು ಅಪಾಯಕಾರಿಯೆನಿಸುವಂತಹ ಔಷಧಿಗಳು, ಮಾತ್ರೆಗಳು ಮಕ್ಕಳಿಗೆ ಸುಲಭವಾಗಿ ಸಿಗದಂತೆ ಎಚ್ಚರಿಕೆಯನ್ನು ವಹಿಸಬೇಕಾಗುತ್ತದೆ. ನಿಗಧಿಪಡಿಸಿದ ವೇಳೆಯನ್ನು (expiry dates) ಮೀರಿದಂತಹ ಟಾನಿಕ್‌ಗಳನ್ನು ಮನೆಯಲ್ಲಿಟ್ಟುಕೊಂಡಿರುವುದು, ಅದರಲ್ಲಿಯೂ ಮಕ್ಕಳಿಗೆ ಸುಲಭವಾಗಿ ಸಿಗುವಂತೆ ಇಟ್ಟಿರುವುದು ಸರಿಯಿಲ್ಲ. ಇವುಗಳ ಸೇವನೆ ತೀವ್ರ ದುಷ್ಪರಿಣಾಮವನ್ನು ಉಂಟುಮಾಡುತ್ತದೆ ಎಂಬುದನ್ನು ಮರೆಯಲಾಗದು. ಆದ್ದರಿಂದ ನಿಗಧಿ ಪಡಿಸಿದ ವೇಳೆಯನ್ನು ಮೀರಿದ ಔಷಧಿಯನ್ನು ಉಪಯೋಗಿಸದೆ ಮನೆಯ ಹೊರಗೆ ಚೆಲ್ಲುವುದು ಒಳ್ಳೆಯದು.

ಕತ್ತರಿ, ಚಾಕು, ಬ್ಲೇಡ್ ಮತ್ತಿತರ ಹರಿತವಾದ ಸಾಧನಗಳು ಮಕ್ಕಳಿಗೆ ಸುಲಭವಾಗಿ ಸಿಗದಂತೆ ಎಚ್ಚರಿಕೆ ವಹಿಸುವುದೂ ಆವಶ್ಯಕ. ಇಂತಹ ಸಾಧನಗಳಿಂದಾಗಿ ಸಣ್ಣ ಅಥವಾ ದೊಡ್ಡ ಪ್ರಮಾಣದ ಗಾಯಗಳನ್ನು ಮಾಡಿಕೊಳ್ಳುವ ಸಾಧ್ಯತೆ ಹಾಗೂ ಆಟದ ರಭಸದಲ್ಲಿ ಇತರ ಮಕ್ಕಳಿಗೆ ಅಪಾಯವನ್ನುಂಟು ಮಾಡುವ ಸಂದರ್ಭಗಳೂ ಕಂಡುಬರುತ್ತವೆ. ಇದೇ ರೀತಿ ಬೆಂಕಿಯ ಆಕಸ್ಮಿಕಗಳ ಬಗ್ಗೆಯೂ ಜಾಗ್ರತೆ ವಹಿಸಬೇಕಾಗುತ್ತದೆ. ತುಂಟರೆನಿಸಿಕೊಂಡ ಮಕ್ಕಳು ಇರುವ ಮನೆಯಲ್ಲಿ ಬೆಂಕಿಯ ಬಗೆಗೆ ಹೆಚ್ಚು

ಜಾಗರೂಕರಾಗಿರಬೇಕು. ಒಲೆ ಉರಿಯುತ್ತಿರುವ ಸಂದರ್ಭಗಳಲ್ಲಿ ಮಕ್ಕಳನ್ನು ಮನೆಯಲ್ಲೇ ಬಿಟ್ಟು ಬೇಗ ಹಿಂದಿರುಗಿ ಬರುವ ಉದ್ದೇಶದಿಂದ ಹೊರಗಡೆ ಹೋಗುವುದು ಅಪಾಯಕಾರಿ. ದೀಪಾವಳಿ ಹಬ್ಬದ ಸಂಭ್ರಮ ಹಲವು ಸಂದರ್ಭಗಳಲ್ಲಿ ದುರಂತದಲ್ಲಿ ಕೊನೆಗೊಳ್ಳಬಹುದು. ಈ ಎಲ್ಲ ಸಂದರ್ಭಗಳಲ್ಲಿ ಸ್ವಲ್ಪ ಮಟ್ಟಿನ ಮುಂಜಾಗ್ರತಾ ಕ್ರಮದಿಂದ ಅನೇಕ ದುರಂತ ಪ್ರಕರಣಗಳನ್ನು ತಡೆಗಟ್ಟಲು ಸಾಧ್ಯವೆನ್ನುವುದನ್ನು ಸದಾ ನೆನಪಿನಲ್ಲಿಟ್ಟುಕೊಳ್ಳಬೇಕಾಗುತ್ತದೆ.

## ವಿದ್ಯುತ್ ಉಪಕರಣಗಳು

ವಿದ್ಯುಚ್ಛಕ್ತಿ ಅತ್ಯಂತ ಉಪಯೋಗಕಾರಿ ಎನಿಸುವುದರ ಜೊತೆಯಲ್ಲಿಯೇ ಎಚ್ಚರತಪ್ಪಿ ನಡೆದರೆ ಅಪಾಯಕಾರಿಯೂ ಹೌದು. ವಿದ್ಯುತ್ ಉಪಕರಣಗಳ ಬಳಕೆ ಎಲ್ಲ ಮನೆಗಳಲ್ಲಿಯೂ ಇಂದು ಹೆಚ್ಚುತ್ತಿದೆ; ಅಂತೆಯೆ ಎಚ್ಚರಿಕೆಯೂ ಅಗತ್ಯ. ಶಾಕ್ ಹೊಡೆಯುವಂತಹ ಉಪಕರಣಗಳು, ಶಿಥಿಲವಾದ ವಿದ್ಯುತ್ ವೈರ್‌ಗಳು, ಮಕ್ಕಳು ಚೇಷ್ಟೆ ಮಾಡಬಹುದಾದಂತಹ ಸ್ವಿಚ್ ಪಾಯಿಂಟ್‌ಗಳು, ಹಳೆಯದಾದಂತಹ ಸ್ವಿಚ್‌ಗಳು, ವಿದ್ಯುತ್ ಇಸ್ತ್ರಿ ಪೆಟ್ಟಿಗೆ, ಇತ್ಯಾದಿಗಳ ಬಗೆಗೆ ಜಾಗ್ರತೆ ಆವಶ್ಯಕ. ಇದೇ ರೀತಿ ಅಡಿಗೆ ಮನೆಯಲ್ಲಿ ಗ್ಯಾಸ್‌ನ ಬಳಕೆಯ ಬಗ್ಗೆಯೂ ಎಚ್ಚರಿಕೆ ಆವಶ್ಯಕ. ಯಾವುದೇ ವಿದ್ಯುತ್ ಉಪಕರಣ ಸ್ವಲ್ಪವೇ ಕೆಟ್ಟಿದ್ದರೂ ಸಹ ಅದರ ಬಗೆಗೆ ಉದಾಸೀನ ಸಲ್ಲದು ಮತ್ತು ಅದರ ಬಳಕೆ ಕೂಡದು. ಕೆಟ್ಟ ಉಪಕರಣಗಳ ಬಳಕೆಯಿಂದ ಶಾಕ್ ಹೊಡೆಯಬಹುದು ; ಒಂದು ದುರಂತವೇ ಸಂಭವಿಸಬಹುದು. ಆದ್ದರಿಂದ ಉದಾಸೀನ ಮಾಡದೆ ಅವುಗಳನ್ನು ರಿಪೇರಿ ಮಾಡಿಸಬೇಕು.

## ಪ್ರಥಮ ಚಿಕಿತ್ಸೆ

ಸಾಧಾರಣ ಜ್ವರ, ಕೆಮ್ಮು ಮತ್ತು ಸಣ್ಣಪುಟ್ಟ ಗಾಯಗಳು, ಮನೆಗಳಲ್ಲಿ ಆಗಾಗ್ಗೆ ಸಂಭವಿಸುವುದು ಸ್ವಾಭಾವಿಕ. ಮಕ್ಕಳ ಮನೆಯ

ಲ್ಲಂತೂ ಒಂದಲ್ಲ ಒಂದು ಇಂತಹ ಪ್ರಕರಣ ಇದ್ದದ್ದೆ. ಸುಟ್ಟಗಾಯ, ಬ್ಲೇಡು, ಕತ್ತರಿ ಇತ್ಯಾದಿ ಹರಿತ ವಸ್ತುಗಳಿಂದ ಗಾಯ, ಎಡವಿ ಬೀಳುವು ದರಿಂದ ಗಾಯ, ಹೀಗೆ ಯಾವುದಾದರೂ ಆಕಸ್ಮಿಕದಿಂದ ಗಾಯಗಳು ಸಂಭವಿಸುವುದು ಸ್ವಾಭಾವಿಕ.

ಇಂತಹ ಪರಿಸ್ಥಿತಿಗೋಸ್ಕರ ಪ್ರತಿ ಮನೆಯಲ್ಲೂ ಪ್ರಥಮ ಚಿಕಿತ್ಸೆ ಯ ಹಲವು ಸಾಮಗ್ರಿಗಳು ಇರಬೇಕು. ಸುಟ್ಟಗಾಯ ಮತ್ತು ಇತರ ಗಾಯಗಳಿಗೆ ಹಚ್ಚಬಹುದಾದಂತಹ ಆಯಿಂಟ್‌ಮೆಂಟ್, ಪ್ಲಾಸ್ಟರ್, ಕ್ರಿಮಿ ನಾಶಕ ಔಷಧಿ ಡೆಟಾಲ್, ಸಾಧಾರಣ ಜ್ವರಕ್ಕೆ ಬಳಸಬಹುದಾದಂತಹ ಮಾತ್ರೆಗಳು, ಹೀಗೆ ಪ್ರಥಮತಃ ಬಳಸಬಹುದಾದ ಹಲವು ಔಷಧಿಗಳನ್ನು ವೈದ್ಯರ ಸಲಹೆಯ ಮೇರೆಗೆ ಮನೆಯಲ್ಲಿ ಇಟ್ಟುಕೊಂಡಿರಬಹುದು. ವೈದ್ಯಕೀಯ ಸೌಲಭ್ಯ ತತ್‌ಕ್ಷಣ ಸಿಗಲಾರದಂತಹ ಗ್ರಾಮಪ್ರದೇಶಗಳಲ್ಲಿ ಹಾಗೂ ಎಲ್ಲ ವೇಳೆಯಲ್ಲೂ ವೈದ್ಯರನ್ನು ಹುಡುಕಿಕೊಂಡು ಹೋಗುವು ದನ್ನು ತಪ್ಪಿಸಲು ನಗರಗಳಲ್ಲಿಯೂ ಇಂತಹ ವ್ಯವಸ್ಥೆಯನ್ನು ಮಾಡಿ ಕೊಳ್ಳಬಹುದು. ಇದು ತಾತ್ಕಾಲಿಕ ಮತ್ತು ಪ್ರಥಮ ಚಿಕಿತ್ಸೆ ಮಾತ್ರ.

ರಸ್ತೆ ಅಪಘಾತಗಳ ಬಗೆಗೆ ಮುನ್ನೆಚ್ಚರಿಕೆ ಮತ್ತೊಂದು ಅಂಶ. ವಾಹನಗಳಿಂದ ಸಂಭವಿಸುವ ಅಪಘಾತ, ರಸ್ತೆಯ ಪಕ್ಕದಲ್ಲಿ ಓಡಾಡ ಬೇಕಾದ ಹಾಗೂ ರಸ್ತೆಯನ್ನು ದಾಟುವಾಗ ವಹಿಸಬೇಕಾದ ಮುನ್ನೆಚ್ಚರಿಕೆ ಗಳ ಬಗ್ಗೆಯೂ ಆಗಾಗ್ಗೆ ಮಕ್ಕಳಿಗೆ ತಿಳಿವಳಿಕೆಯನ್ನು ಕೊಡಬೇಕಾಗು ತ್ತದೆ.

ಮೇಲಿನ ಎಲ್ಲ ಸಂದರ್ಭಗಳಲ್ಲಿ ತಂದೆಯಷ್ಟೇ ಹೊಣೆ ತಾಯಿಯ ಮೇಲೂ ಇದೆ. ಎನ್ನುವುದನ್ನು ಒಪ್ಪಿಕೊಳ್ಳುವ ನೆಪದಲ್ಲಿ, ತಂದೆ ತನ್ನ ಹೊಣೆಯನ್ನು ಕಡಿಮೆಗೊಳಿಸಲಾಗದು. ಗೃಹಕೃತ್ಯಗಳ ನಡುವೆ ಮೇಲಿನ ಅನೇಕ ವಿಷಯಗಳ ಬಗೆಗೆ ತಾಯಿ ಪೂರ್ಣ ಗಮನ ಕೊಡಲು ಆಗದೇ ಇರಬಹುದು. ಅಲ್ಲದೆ ತಾಯಿಯ ಜಾಗ್ರತೆಯೊಂದಿಗೆ ತಂದೆಯ ಜಾಗ್ರತೆಯೂ ಸೇರಿದಾಗ ಪರಿಣಾಮ ಹೆಚ್ಚು ಫಲಕಾರಿಯಾಗುವುದಿಲ್ಲವೆ?

ಹೀಗೆ ಮಕ್ಕಳ ಆರೋಗ್ಯಕ್ಕೆ ಸಂಬಂಧಪಟ್ಟ ಸಣ್ಣಪುಟ್ಟ ವಿಷಯ ಗಳಿಂದ ಹಿಡಿದು, ನಾನಾ ಅಪಘಾತಗಳ ಸಾಧ್ಯತೆಯ ಬಗ್ಗೆಯೂ ಎಚ್ಚರ ದಿಂದ ಇರಬೇಕಾದ ಹೊಣೆ ಹಿರಿಯರ ಮೇಲಿದೆ. ತಂದೆ ಈ ವಿಷಯ ಗಳಲ್ಲಿ ಹೆಚ್ಚಿನ ಜವಾಬ್ದಾರಿಯನ್ನು ವಹಿಸಬೇಕಾಗುತ್ತದೆ.

# ಮಕ್ಕಳ ಯೋಗಕ್ಷೇಮ

ಮಕ್ಕಳ ಮತ್ತು ಪೋಷಕರ ನಡುವಿನ ಸಮರ್ಪಕ ಸಾಮಾಜಿಕ ಸಂಬಂಧ, ಮಕ್ಕಳ ವ್ಯಕ್ತಿತ್ವ ವಿಕಾಸಕ್ಕೆ ಬಹು ಮುಖ್ಯ. ತಾಯಿ ಮತ್ತು ಮಕ್ಕಳ ನಡುವಿನ ಸಂಬಂಧ ಈ ದಿಸೆಯಲ್ಲಿ ಒಂದು ರೀತಿಯ ತಳಹದಿ ಯನ್ನು ಹಾಕಿದರೆ, ತಂದೆಯ ಪಾತ್ರ ಮತ್ತೊಂದು ರೀತಿಯದು.

ಮಕ್ಕಳ ವ್ಯಕ್ತಿತ್ವ ವಿಕಾಸದಲ್ಲಿ, ನಡವಳಿಕೆಯನ್ನು ತಿದ್ದುವಲ್ಲಿ ಹಾಗೂ ಮೌಲ್ಯಗಳನ್ನು ಬೋಧಿಸುವಲ್ಲಿ. ತಂದೆ ಮತ್ತು ತಾಯಿ, ಇವರಲ್ಲಿ ಯಾರ ಪಾತ್ರ ಹೆಚ್ಚು ಎಂದು ನಿರ್ದಿಷ್ಟವಾಗಿ ಹೇಳಲಾಗುವುದಿಲ್ಲ. ಚಿಕ್ಕ ವಯಸ್ಸಿನಲ್ಲಿ ತಾಯಿಯ ಸಹವಾಸವನ್ನು ಅತಿಯಾಗಿ ಬಯಸುವ ಮಕ್ಕಳು ಕ್ರಮೇಣ ತಮ್ಮ ಸಹವಾಸದ ವ್ಯಕ್ತಿಗಳು ಮತ್ತು ವ್ಯಾಪ್ತಿಯನ್ನು ವಿಸ್ತಾರಗೊಳಿಸುತ್ತಾ ಬೆಳೆಯುತ್ತವೆ. ಈ ಮಧ್ಯೆ, ತಂದೆ ಮತ್ತು ತಾಯಿಯ ಪಾತ್ರವೂ ಮುಂದುವರೆಯುತ್ತದೆ. ತಾಯಿಯು ಶಿಕ್ಷಿತಳಾಗಿದ್ದು ಹೆಚ್ಚಿನ ಆಸಕ್ತಿಯನ್ನು ವಹಿಸಿದ ಪಕ್ಷದಲ್ಲಿ, ಒಂದು ಹಂತದವರೆಗೆ ಮಕ್ಕಳ ಅಭಿ ವೃದ್ಧಿಯನ್ನು ಸಾಧಿಸಬಹುದು. ತಾಯಿಯ ಜೊತೆಯಲ್ಲಿ ತಂದೆಯೂ ಶಿಕ್ಷಿತನಾಗಿದ್ದು ಹಾಗೂ ಆಸಕ್ತಿ ವಹಿಸಿದ ಸಂದರ್ಭದಲ್ಲಿ ಮಕ್ಕಳ ಪ್ರಗತಿ ಮತ್ತಷ್ಟು ಶೀಘ್ರವೆನಿಸುತ್ತದೆ. ಆದರೆ ಪತ್ನಿ ಶಿಕ್ಷಿತಳಲ್ಲದೆ ಮುಗ್ಧಳಾಗಿದ್ದ ಸಂದರ್ಭದಲ್ಲಿ ಪತಿಯ ಹೊಣೆ ಮತ್ತೂ ಅಧಿಕವೆನಿಸುತ್ತದೆ.

ಸಾಮಾನ್ಯವಾಗಿ ತಂದೆ ಮಕ್ಕಳ ನಡುವೆ ವ್ಯಾವಹಾರಿಕವೆನಿಸು ವಂತಹ ಸಂಬಂಧವೇ ಹೆಚ್ಚು ಪ್ರಕರಣಗಳಲ್ಲಿ ಕಂಡುಬರುತ್ತದೆ. ಕೆಲವು ಪ್ರಕರಣಗಳಲ್ಲಿ, ತಂದೆಯೆಂದರೆ ಹೆದರಿಕೆಯುಂಟಾಗುವ ವ್ಯಕ್ತಿಯೆನಿಸಿದರೆ, ಉಳಿದ ಹೆಚ್ಚಿನ ಪ್ರಕರಣಗಳಲ್ಲಿ ಅತ್ಯಂತ ಕಡಿಮೆ ಅವಧಿಯ ಹಾಗೂ ಕೃತಕವೆನಿಸುವಂತಹ, ತಂದೆ-ಮಕ್ಕಳ ಸಾಮಾಜಿಕ ಸಂಬಂಧ ಕಂಡುಬರುತ್ತದೆ. ಇದಕ್ಕೆ ಕಾರಣಗಳು ಹಲವಾರು. ಸರಿಯಾದ ತಿಳಿವಳಿಕೆಯಿಲ್ಲದೆ ಅಥವಾ

ಅಥವಾ ದಿನವಿಡೀ ದುಡಿಯಬೇಕಾದಂತಹ ಹಲವು ಜನರು ತಮ್ಮ ಮಕ್ಕಳೊಂದಿಗೆ ಹೆಚ್ಚು ಕಾಲವನ್ನು ಆತ್ಮೀಯವಾಗಿ ಕಳೆಯಲಾಗದೇ ಇರಬಹುದು. ಇನ್ನು ಕೆಲವರು, ಹಣ ಸಂಪಾದನೆಯೇ ಅತಿ ಪ್ರಾಮುಖ್ಯವೆಂದು ಭಾವಿಸಿ, ಅದಕ್ಕೆ ತಮ್ಮೆಲ್ಲ ಕಾಲ ಮತ್ತು ಗಮನವನ್ನು ಹರಿಸಿ, ಮಕ್ಕಳ ಜೊತೆ ಕಾಲ ಕಳೆಯುವ ಮತ್ತು ಆತ್ಮೀಯ ಸಂಪರ್ಕವನ್ನು ಬೆಳೆಸಿಕೊಳ್ಳುವುದನ್ನು ನಿರ್ಲಕ್ಷಿಸಿರಬಹುದು. ಬಹುಶಃ ಅತಿ ಕಡಿಮೆ ಸಂಖ್ಯೆಯ ಪುರುಷರು ತಮ್ಮ ಮಕ್ಕಳ ಜೊತೆ ಆತ್ಮೀಯವಾಗಿ ಹೆಚ್ಚು ಕಾಲ ಕಳೆಯುವುದು ಹಾಗೂ ಮೇಲ್ವಿಚಾರಣೆ ವಹಿಸುವ ಅಭ್ಯಾಸ ಹೊಂದಿರುತ್ತಾರೆ ಎನ್ನಬಹುದು.

ಮಕ್ಕಳೊಂದಿಗೆ ತಂದೆಯ ಸಂಪರ್ಕ, ಕಾಲದ ಮಿತಿಯಿಂದ ಸ್ವಲ್ಪ ಕಷ್ಟವೆನಿಸದರೂ ಸಹ, ಸಿಗಬಹುದಾದಂತಹ ವೇಳೆಯನ್ನು ಹೆಚ್ಚು ಆತ್ಮೀಯ ಹಾಗೂ ಅರ್ಥಪೂರ್ಣವಾಗಿ ಕಳೆಯಬಹುದಾದ ದಿಸೆಯಲ್ಲಿ ಯೋಚಿಸಬೇಕು. ಮಕ್ಕಳಲ್ಲಿ ಭಯ, ಶಿಸ್ತು ಇತ್ಯಾದಿಗಳನ್ನು ಬೆಳೆಸುವ ಹೆಸರಿನಲ್ಲಿ, ಮನೆಯ ಮಕ್ಕಳ ದೃಷ್ಟಿಯಲ್ಲಿ ತಂದೆ ಒಬ್ಬ ಪೊಲೀಸ್ ಅಧಿಕಾರಿಯ ಪಾತ್ರವನ್ನು ನಿರ್ವಹಿಸಬೇಕಿಲ್ಲ. ಅಂದರೆ, ತಂದೆಯನ್ನು ಕಂಡಾಗ ಹೆದರಿಕೆಯನ್ನು ಮಾತ್ರ ಹೊಂದಿ, ಆದಷ್ಟು ಆತನಿಂದ ಕಣ್ಣುತಪ್ಪಿಸಿ ಇರಬೇಕೆಂಬ ಪ್ರವೃತ್ತಿ ಮಕ್ಕಳಲ್ಲಿ ಬೆಳೆಯುವುದೂ ಸಾಧುವಲ್ಲ. ತನ್ನ ಜ್ಞಾನ, ಅನುಭವಗಳು ಮಕ್ಕಳಿಗೆ ಉಪಯೋಗವಾಗುವಂತೆ ಅಥವಾ ಪ್ರೀತಿ ವಿಶ್ವಾಸ ಮತ್ತು ಆತ್ಮೀಯ ವರ್ತನೆಗಳಿಂದ ಮಕ್ಕಳು ಸರಿ ಮಾರ್ಗದಲ್ಲಿ ಮುಂದುವರೆಯುವಂತೆ ತಂದೆ, ತನ್ನ ಕಾಲವನ್ನು ಉಪಯೋಗಿಸಬಹುದು. ಮಕ್ಕಳು, ಇನ್ನೂ ವಿಕಾಸ ಹೊಂದಬೇಕಾದ ಶೈಶವಾವಸ್ಥೆಯಲ್ಲಿರುವ ವ್ಯಕ್ತಿಗಳಷ್ಟೆ. ಅವರಿಗೆ ಸ್ಪಷ್ಟ ಮತ್ತು ನಿರ್ದಿಷ್ಟ ರೂಪು ಕೊಡುವುದು ಹಿರಿಯರ ಹೊಣೆ ಎಂದು ಹೇಳುವುದುಂಟು. ಅಂತೆಯೆ, ಇದರಲ್ಲಿ ತಂದೆಯ ಪಾತ್ರವೇನು ಎಂದು ವಿವೇಚಿಸುವುದು ಒಳಿತು.

## ದೇವರಲ್ಲಿ ನಂಬಿಕೆ

ದೇವರಲ್ಲಿ ನಂಬಿಕೆ ಮತ್ತು ಭಕ್ತಿ, ಮಕ್ಕಳ ನಡೆ–ನುಡಿಯನ್ನು ತಿದ್ದುವಲ್ಲಿ ಅತ್ಯಂತ ಸಹಕಾರಿ. ದೇವರ ಪೂಜೆ, ಅದಕ್ಕಾಗಿ ಶುಚಿತ್ವ ಆವಶ್ಯಕ ಎನ್ನುವ ಅಂಶವನ್ನು ಮಕ್ಕಳಲ್ಲಿ ಮೂಡಿಸಬಹುದು. ದೇವರ ಪೂಜೆ, ದೇವರ ಕಲ್ಪನೆ, ಸ್ವರ್ಗದ ಕಲ್ಪನೆ, ದೇವರು ಸದಾ ಒಳ್ಳೆಯತನ ಮತ್ತು ನಡವಳಿಕೆಯನ್ನು ಇಷ್ಟಪಡುತ್ತಾನೆ, ಅಂತಹವರಿಗೆ ಒಳ್ಳೆಯದನ್ನು ಮಾಡುತ್ತಾನೆ, ಕೆಟ್ಟ ನಡವಳಿಕೆಗೆ ಶಿಕ್ಷೆಯನ್ನು ಕೊಡುತ್ತಾನೆ, ಇತ್ಯಾದಿ ಬೋಧನೆಗಳ ಮೂಲಕ ಹಲವು ಮೌಲ್ಯಗಳನ್ನು ಮಕ್ಕಳಲ್ಲಿ ತುಂಬಬಹುದು. ಸುಳ್ಳು ಹೇಳುವುದು, ಕಳ್ಳತನ ಮಾಡುವುದು, ಹಿರಿಯರಿಗೆ ಅವಿಧೇಯರಾಗಿ ನಡೆದುಕೊಳ್ಳುವುದು ಒಳ್ಳೆಯದಲ್ಲ; ಹಾಗೂ ದೇವರು ಮೆಚ್ಚುವುದಿಲ್ಲ ಎನ್ನುವುದನ್ನು ಸ್ಪಷ್ಟಪಡಿಸಬಹುದು. ದಯೆ, ಸತ್ಯ, ಅಹಿಂಸೆ, ಅನುಕಂಪ, ಕರ್ತವ್ಯ ಪ್ರಜ್ಞೆ ಇತ್ಯಾದಿ ಅಂಶಗಳನ್ನು ದೇವರ ಹೆಸರಿನಲ್ಲಿ ಮಕ್ಕಳಿಗೆ ಬೋಧಿಸಿ ಅವರನ್ನು ಉತ್ತಮ ಪ್ರಜೆಗಳನ್ನಾಗಿ ರೂಪಿಸಬಹುದು. ಮತ್ತೊಂದು ದಿಸೆಯಲ್ಲಿ, ದೇವರ ಹಾಡು ಮತ್ತು ಶ್ಲೋಕಗಳ ಪಠನೆ, ಮಕ್ಕಳಲ್ಲಿ ಸ್ಪಷ್ಟ ಉಚ್ಚಾರಣೆಯನ್ನು ಕಲಿಸುವುದರ ಜೊತೆಗೆ, ಭಾಷೆಯ ಮೇಲೆ ಹಿಡಿತವನ್ನು ಸಾಧಿಸಬಲ್ಲದು.

ಹೀಗೆಂದ ಮಾತ್ರಕ್ಕೆ, ಮಕ್ಕಳಲ್ಲಿ ಮೂಢ ನಂಬಿಕೆ ಮತ್ತು ಅಂಧ ಶ್ರದ್ಧೆಯನ್ನು ಬೆಳೆಸಬೇಕೆಂದು ಇದರ ಅರ್ಥವಲ್ಲ. ಮಕ್ಕಳಲ್ಲಿ ಉತ್ತಮ ನಡೆನುಡಿಯನ್ನು ರೂಪಿಸುವಲ್ಲಿ ಒಂದು ಹಂತದವರೆಗೆ ಇಂತಹ ನಂಬಿಕೆ ಆವಶ್ಯವೆನಿಸುತ್ತದೆ. ದೇವರ ಕಲ್ಪನೆ ಮತ್ತು ಪೂಜೆಯನ್ನು, ಮಗುವಿನ ನಡೆನುಡಿ ತಿದ್ದುವಲ್ಲಿ ಒಂದು ಸಾಧನವನ್ನಾಗಿ ಆವಶ್ಯವೆನಿಸುವ ಮಟ್ಟಿಗೆ ಬಳಸಬೇಕು. ಇಂತಹ ವಿಷಯಗಳ ಬಗೆಗೆ ಸೂಕ್ತ ತಿಳಿವಳಿಕೆಯ ಮೂಲಕ ತಂದೆ, ಮಕ್ಕಳ ವ್ಯಕ್ತಿತ್ವ ವಿಕಾಸದಲ್ಲಿ ಸಹಾಯವಾಗಬಲ್ಲ; ಮಕ್ಕಳು ಬೆಳೆದ ಹಾಗೆ, ತಿಳಿವಳಿಕೆ ಹೆಚ್ಚಿದ ಹಾಗೆ, ದೇವರ ಕಲ್ಪನೆಯ ಬಗ್ಗೆಯೂ ಮುಕ್ತವಾಗಿ ಚರ್ಚಿಸಿ, ಸ್ಪಷ್ಟ ಅಭಿಪ್ರಾಯವನ್ನು ರೂಢಿಸಬಹುದು.

## ಹಿರಿಯರಲ್ಲಿ ಗೌರವ

ಹಿರಿಯರ ಬಗೆಗೆ ಗೌರವ, ಭಕ್ತಿ, ಮರ್ಯಾದೆಯನ್ನು ಮಕ್ಕಳಲ್ಲಿ ಮೂಡಿಸುವುದು ಅಷ್ಟೇ ಆವಶ್ಯಕ. ಮನೆಯ ಹಿರಿಯರ ಬಗೆಗೆ ಗೌರವ ಯುತವಾಗಿ ನಡೆದುಕೊಳ್ಳುವುದು, ಮಕ್ಕಳ ಉತ್ತಮ ನಡವಳಿಕೆಯ ದೃಷ್ಟಿಯಿಂದ ಅತ್ಯಂತ ಆವಶ್ಯಕ. ತಂದೆ ಮತ್ತು ತಾಯಿಯನ್ನು ಮಕ್ಕಳು ಏಕವಚನದಲ್ಲಿ ಮಾತನಾಡಿಸುವ ಪದ್ಧತಿ ಕೆಲವರಲ್ಲಿ ಕಂಡುಬಂದರೂ ಸಹ, ವ್ಯಾಪಕವಾಗಿ ಬಳಕೆಯಲ್ಲಿರುವ ಪದ್ಧತಿಯ ಪ್ರಕಾರ ಬಹುವಚನದಲ್ಲಿ ಮಾತನಾಡಿಸುವಂತಹುದು. ಇದು ಹಿರಿಯರನ್ನು ಗೌರವದಿಂದ ಕಾಣಬೇಕು ಎಂಬ ವಿಷಯಕ್ಕೆ ಅಡಿಪಾಯವಿದ್ದಂತೆ. ಅಕ್ಕ, ಅಣ್ಣ ಮತ್ತಿತರ ಹಿರಿಯ ಸದಸ್ಯರುಗಳನ್ನು ಬಹುವಚನದಲ್ಲಿ ಮಾತನಾಡಿಸುವುದು ಹಾಗೂ ಗೌರವ ತೋರಿಸುವುದು ಸೂಕ್ತ ನಡವಳಿಕೆಯೆನಿಸುತ್ತದೆ. ಮನೆಯ ಹೊರ ಗಡೆಯೂ ಸಹ, ವಯಸ್ಸಿಗೆ ಮರ್ಯಾದೆಯನ್ನು ಕೊಟ್ಟು, ಹಿರಿಯರನ್ನು ಗೌರವದಿಂದ ಕಾಣುವ ಪ್ರವೃತ್ತಿಯನ್ನು ಬೆಳೆಸಬೇಕು.

ಶಾಲೆಯಲ್ಲಿ ಪಾಠ ಹೇಳಿಕೊಡುವ ಉಪಾಧ್ಯಾಯರುಗಳ ಬಗೆಗೆ ಗುರುಭಾವನೆಯನ್ನು, ಗೌರವ ಭಾವನೆಯನ್ನು ಮಕ್ಕಳು ಬೆಳೆಸಿಕೊಳ್ಳು ವುದು ಶ್ರೇಯಸ್ಕರ. ಬೋಧಿಸುವ ಗುರುಗಳ ಬಗೆಗೆ ಗೌರವ ಮೂಡದಿದ್ದ ಪಕ್ಷದಲ್ಲಿ, ಅವರ ಬೋಧನೆ ವಿದ್ಯಾರ್ಥಿಗೆ ಹಿಡಿಸುವುದಿಲ್ಲ; ಅವರು ಹೇಳಿ ಕೊಟ್ಟದ್ದನ್ನು ಕಲಿಯಬೇಕೆಂಬ ಶ್ರದ್ಧೆ ಉಳಿಯುವುದಿಲ್ಲ. ಇದಕ್ಕೆ ಪ್ರತಿ ಯಾಗಿ ಅವರ ಬಗ್ಗೆ ತಾತ್ಸಾರ, ಅಸಭ್ಯ ವರ್ತನೆ, ಕಿಡಿಗೇಡಿತನ ವಿದ್ಯಾರ್ಥಿ ಯಲ್ಲಿ ಬೆಳೆದಂತೆ, ವಿದ್ಯಾರ್ಥಿ ವಿದ್ಯಾಭ್ಯಾಸದಿಂದ ದೂರ ಸರಿಯುವ ಸಾಧ್ಯತೆ ಹೆಚ್ಚು.

ಮತ್ತೊಂದು ಮಾತು. ಒಂದು ಉನ್ನತ ಹುದ್ದೆಯಲ್ಲಿರುವ ಅಧಿಕಾರಿ ಅಥವಾ ಒಬ್ಬ ಸಾಹುಕಾರ, ಇವರ ದೃಷ್ಟಿಯಲ್ಲಿ ಶಾಲೆಯ ಉಪಾಧ್ಯಾಯನೆಂದರೆ, ನಿಕೃಷ್ಟವಾಗಿ ಕಾಣಬಹುದಾದ ವ್ಯಕ್ತಿ ಎನಿಸ ಬಹುದು. ಆದರೆ ಅವರ ಮಕ್ಕಳ ದೃಷ್ಟಿಯಲ್ಲಿ, ಉಪಾಧ್ಯಾಯ ಒಬ್ಬ

ಗೌರವಾನ್ವಿತ ವ್ಯಕ್ತಿಯೇ ಸರಿ. ಎಂತಹವರ ಮಕ್ಕಳೇ ಆಗಿರಲಿ, ಮಕ್ಕಳಲ್ಲಿ ಗುರುಗಳ ಬಗೆಗೆ ಗೌರವ ಭಾವನೆ ಇಲ್ಲದಿದ್ದ ಪಕ್ಷದಲ್ಲಿ ವಿದ್ಯೆ ಅಪೂರ್ಣ ವೆನಿಸುತ್ತದೆ. ಆದ್ದರಿಂದ, ಉಪಾಧ್ಯಾಯರ ಬಗೆಗೆ ಗೌರವ ಬೆಳೆಸಿಕೊಳ್ಳು ವಂತೆ ಹಿರಿಯರು ತಮ್ಮ ಮಕ್ಕಳಿಗೆ ತಿಳಿಸಬೇಕೇ ಹೊರತು, ತಮ್ಮ ಅಧಿಕಾರ ಅಥವಾ ಐಶ್ವರ್ಯದ ಅಂತಸ್ತಿನಲ್ಲಿ, ಮನೆಯಲ್ಲಿ ಮಕ್ಕಳೆದುರು ಅವರ ಉಪಾಧ್ಯಾಯರುಗಳ ಬಗೆಗೆ ನಿಕೃಷ್ಟವಾಗಿ ಮಾತನಾಡುವುದು ಸಲ್ಲದು. ಶಾಲೆ ನಂತರ ಕಾಲೇಜು, ಹೀಗೆ ಮುಂದುವರೆಯುವಂತಹ ಮಕ್ಕಳು ಎಲ್ಲ ಹಂತಗಳಲ್ಲಿಯೂ ಉಪಾಧ್ಯಾಯರುಗಳ ಬಗೆಗೆ ಗೌರವ ಭಾವನೆಯನ್ನು ಬೆಳೆಸಿಕೊಳ್ಳಬೇಕು.

ಹಿರಿಯರು ಮತ್ತು ಗುರುಗಳ ಬಗೆಗೆ ಮರ್ಯಾದೆಯಿಂದ ವರ್ತಿಸದ ಮಕ್ಕಳು ಮುಂದೆ ತಂದೆ ತಾಯಿಗೇ ತಲೆ ನೋವಾಗಿ ಪರಿಣಮಿಸ ಬಹುದು. ತಮಗೇ ಗೌರವ ತೋರಿಸದ ಮತ್ತು ಕೈತಪ್ಪಿ ಹೋದಂತಹ ಮಕ್ಕಳಿಗೋಸ್ಕರ ಇಳಿ ವಯಸ್ಸಿನಲ್ಲಿ ಕಣ್ಣೀರು ಹಾಕುವ ತಂದೆ ತಾಯಿಯರಿ ಗೇನೂ ಕೊರತೆಯಿಲ್ಲ. ಚಿಕ್ಕಂದಿನಿಂದಲೇ ಉತ್ತಮ ಗುಣಗಳನ್ನು ಬೆಳೆಸುವ ಮೂಲಕ ಮಕ್ಕಳ ಅಭಿವೃದ್ಧಿಗೆ ಹಿರಿಯರು ಸಹಾಯವಾಗಬಲ್ಲರು.

## ಮಕ್ಕಳ ಮನರಂಜನೆ

ಪ್ರತಿ ನಿತ್ಯ ನೇರವಾಗಿ ಮಕ್ಕಳಿಗೆ ಮನರಂಜನೆಯನ್ನು ಒದಗಿ ಸುವ ಕಾರ್ಯದಲ್ಲಿ ತಂದೆಯ ಪಾತ್ರ ಕಡಿಮೆಯೆ ಎನಿಸುತ್ತದೆ. ಬಹಳ ಮಟ್ಟಿಗೆ ತಾಯಿ ಈ ಜವಾಬ್ದಾರಿಯನ್ನು ನಿರ್ವಹಿಸಬಲ್ಲಳು. ಅಲ್ಲದೆ, ಮಕ್ಕಳು ಅಕ್ಕಪಕ್ಕದ ಮನೆಯ ಮಕ್ಕಳೊಡನೆ ಬೆರೆತು ತಮ್ಮ ಮನರಂಜನೆಯ ಆವಶ್ಯಕತೆಯನ್ನು ತಾವೇ ಪೂರೈಸಿಕೊಳ್ಳುವ ಪರಿಸ್ಥಿತಿಯೂ ಹೆಚ್ಚು. ಆದರೂ ತಂದೆ, ಮಕ್ಕಳ ಬೆಳವಣಿಗೆಯೊಂದಿಗೆ ಅವರ ಮನರಂಜನೆಯ ಆವಶ್ಯಕತೆಗಳನ್ನು ಗಮನಿಸಿ, ಸಾಧ್ಯವಾದ ಮಟ್ಟಿಗೆ ಅವುಗಳನ್ನು ಪೂರೈಸು ವಲ್ಲಿ ನೆರವಾಗಬಲ್ಲ. ತನ್ನ ಆರ್ಥಿಕ ಇತಿಮಿತಿಗಳಲ್ಲಿಯೆ, ಬುದ್ಧಿವಂತಿಕೆ ಯಿಂದ ಮಕ್ಕಳ ಮನರಂಜನಾ ಸಾಮಗ್ರಿಗಳನ್ನು ಒದಗಿಸಬಹುದು.

ಎಲ್ಲ ಆಟದ ಸಾಮಗ್ರಿಗಳನ್ನು ಒಮ್ಮೆಲೇ ಒದಗಿಸುವ ಬದಲು, ನಿಧಾನ ವಾಗಿ ಹಲವು ದಿನ ಅಥವಾ ತಿಂಗಳುಗಳ ಅಂತರದಲ್ಲಿ ಒದಗಿಸುವುದು ಸೂಕ್ತವೆನಿಸುತ್ತದೆ. ಹೊಸ ಮನರಂಜನಾ ಸಾಮಗ್ರಿಯ ಬಗ್ಗೆ ಕಾತುರ ಮತ್ತು ಆಕರ್ಷಣೆಯನ್ನು ಮಕ್ಕಳಲ್ಲಿ ಹಾಗೆಯೇ ಮುಂದುವರೆಸಿಕೊಂಡು ಹೋಗುವುದು ಹೆಚ್ಚು ಸೂಕ್ತ. ಒಂದು ವಯಸ್ಸಿನವರೆಗೆ ಮಕ್ಕಳಿಗೆ ನಾನಾ ರೀತಿಯ ಆಟದ ಸಾಮಗ್ರಿಗಳನ್ನು ಒದಗಿಸುವುದು ಅವಶ್ಯವೆನಿಸಿದರೆ, ಜೊತೆ ಜೊತೆಯಲ್ಲಿಯೆ ಜಾಣ್ಮೆಯಿಂದ, ಹೆಚ್ಚು ಖರ್ಚಿಲ್ಲದ, ಮನೆಯಲ್ಲಿ ಯೂ ಆಡಬಹುದಾದಂತಹ ಆಟ ಅಥವಾ ಹವ್ಯಾಸಗಳಲ್ಲಿ ಆಸಕ್ತಿಯನ್ನು ಬೆಳೆಸಬಹುದು. ಪ್ರತಿ ಮನೆಯ ಪರಿಸ್ಥಿತಿ ಮತ್ತು ಅನುಕೂಲಗಳನ್ನು ಅವಲಂಬಿಸಿ, ಮನೆಯ ಹಿರಿಯರು ಈ ದಿಸೆಯಲ್ಲಿ ಯೋಚನೆಮಾಡಿ, ಮಕ್ಕಳ ಮನಸ್ಸು ಪ್ರಫುಲ್ಲವಾಗಿರುವುದರ ಜೊತೆಯಲ್ಲಿ, ಉತ್ತಮ ಮತ್ತು ಜಾಣ್ಮೆಯ ಚಟುವಟಿಕೆಗಳಲ್ಲಿ ತೊಡಗುವಂತೆ ನೋಡಿಕೊಳ್ಳಬೇಕು.

ವಾರಕ್ಕೊಮ್ಮೆ ಅಥವಾ ಶಾಲೆಯ ರಜಾದಿನಗಳು ಹಾಗೂ ವಿಶೇಷ ದಿನಗಳಲ್ಲಿ, ಮಕ್ಕಳನ್ನು ವಿಹಾರಕ್ಕೆ, ಅಂದರೆ ಮನರಂಜನೆಗಾಗಿ ಹೊರಗಡೆ ಕರೆದುಕೊಂಡು ಹೋಗುವ ಅಭ್ಯಾಸ ಬೆಳೆಸಿಕೊಳ್ಳಬಹುದು. ಊರಿನಲ್ಲಿರ ಬಹುದಾದಂತಹ ಉದ್ಯಾನವನ, ಮಕ್ಕಳ ಪಾರ್ಕ್, ಪ್ರಾಣಿ ಸಂಗ್ರಹಾಲಯ, ಊರಿನ ಸುತ್ತ ಮುತ್ತ ಸಮೀಪದಲ್ಲಿರಬಹುದಾದ ಪ್ರೇಕ್ಷಣೀಯ ಸ್ಥಳಗಳಿಗೆ ಕರೆದೊಯ್ಯುವುದು ಸೂಕ್ತ. ರೈಲು ಪ್ರಯಾಣ ಮಕ್ಕಳಿಗೆ ಅತಿ ಸಂತೋಷ ವನ್ನು ತಂದುಕೊಡುತ್ತದೆ. ಆದ್ದರಿಂದ ಅವರಿಗೋಸ್ಕರವಾಗಿಯೆ ಆಗಾಗ್ಗೆ ರೈಲಿನಲ್ಲಿ ಹತ್ತಿರದ ಊರುಗಳಿಗೆ ಸುಮ್ಮನೆ ಹೋಗಿ ಬರಬಹುದು. ಇದರಿಂದ ಮಕ್ಕಳಿಗಾಗುವ ಆನಂದ ಮತ್ತು ಅನುಭವವನ್ನು ಇದಕ್ಕೆ ತಗಲುವ ಖರ್ಚಿನೊಂದಿಗೆ ಹೋಲಿಸಿದಾಗ ಆ ಖರ್ಚು ಅತಿ ಕಡಿಮೆಯೆ ಎನಿಸುತ್ತದೆ. ತಂದೆ ತಾಯಿಯೊಡನೆ ಅಥವಾ ಕೇವಲ ತಂದೆಯೊಡನೆ, ಹೀಗೆ ಹೊರಗಡೆ ಹೋಗಿಬರುವ ಮಕ್ಕಳಿಗೆ, ಮನರಂಜನೆಯ ಜೊತೆಯಲ್ಲಿ ಹೊಸ ಅನುಭವ ಹಾಗೂ ತಿಳಿವಳಿಕೆಯ ಮಟ್ಟ ಹೆಚ್ಚುವ ಸಾಧ್ಯತೆ ಇದೆ.

## ಕಥೆಗಳು

ಸುಮಾರು 4 – 5 ವರುಷಗಳ ನಂತರ ಮಕ್ಕಳಿಗೆ ಕಥೆಯಲ್ಲಿ ಆಸಕ್ತಿ ಮೂಡುವುದು ಅತ್ಯಂತ ಸಹಜ. ಒಂದು ಹಂತದವರೆಗೆ ಈ ಆಸಕ್ತಿ ಬೆಳೆಯುತ್ತಾ ಸಾಗುತ್ತದೆ. ಕಥೆ ಹೇಳೆಂದು, ಮಕ್ಕಳು ಅಮ್ಮನನ್ನು ಕಾಡುವುದು, ಅಪ್ಪ ಸಲಿಗೆಯಿಂದ ಇದ್ದ ಪಕ್ಷದಲ್ಲಿ ಆತನನ್ನು ಕಾಡುವುದೂ ಸ್ವಾಭಾವಿಕ.

ಕಥೆಗಳು ಮಕ್ಕಳಿಗೆ ಸ್ಫೂರ್ತಿ ಕೊಡಬಲ್ಲವು, ಬುದ್ಧಿಯನ್ನು ಚುರುಕುಗೊಳಿಸಬಲ್ಲವು, ಕಲ್ಪನಾ ಸಾಮರ್ಥ್ಯವನ್ನು ಹೆಚ್ಚಿಸಬಲ್ಲವು. ಇಷ್ಟೆ ಅಲ್ಲ, ನೀತಿ ಪ್ರಧಾನ ಕಥೆಗಳ ಮೂಲಕ ನೀತಿ ಬೋಧನೆ, ಮೌಲ್ಯ ಮತ್ತು ಆದರ್ಶಗಳನ್ನು ಮಕ್ಕಳ ಮನಸ್ಸಿನಲ್ಲಿ ಮೂಡಿಸುವುದೂ ಸಾಧ್ಯ. ಅಂತೆಯೆ, ಮಕ್ಕಳ ವಯಸ್ಸು ಮತ್ತು ಮನಸ್ಸಿಗೆ ಅನುಗುಣವಾದ ಕಥೆಗಳನ್ನು ಆಗಾಗ್ಗೆ ಹೇಳುತ್ತಿರುವುದು ಒಳ್ಳೆಯದು.

ಕಥೆಗಳನ್ನು ಕೇಳುವುದರ ಜೊತೆಗೆ, ಕ್ರಮೇಣ ಕಥೆಗಳನ್ನು ಸ್ವತಃ ಓದುವ ಅಭ್ಯಾಸವನ್ನು ಮಕ್ಕಳು ಬೆಳೆಸಿಕೊಳ್ಳುವಂತೆ ಮಾಡಬೇಕು. ಇದರಿಂದ ಮಕ್ಕಳ ಭಾಷೆಯಲ್ಲಿ ಸುಧಾರಣೆಯಾಗುತ್ತದೆ. ಓದುವ ಅಭ್ಯಾಸ ಹೆಚ್ಚುತ್ತದೆ. ಅಂತೆಯೆ, ಯೋಗ್ಯ ಕಥೆ ಪುಸ್ತಕಗಳನ್ನು ಒದಗಿಸುವುದು, ಅವುಗಳನ್ನು ಓದಿ ಅರ್ಥಮಾಡಿಕೊಂಡು, ಪುನಃ ಹೇಳುವಂತಹ ಸಾಮರ್ಥ್ಯ ವನ್ನು ಮಕ್ಕಳು ಬೆಳೆಸಿಕೊಳ್ಳುವಂತೆ ಉತ್ತೇಜನ ಕೊಡುವುದು ಹಿರಿಯರ ಜವಾಬ್ದಾರಿಗಳಲ್ಲೊಂದು. ತಂದೆಯೂ ಸಹ, ಆಗಾಗ್ಗೆ ಅಲ್ಲಲ್ಲಿ ಕಥೆಗಳನ್ನು ಸಂಗ್ರಹಿಸಿ, ಮಕ್ಕಳಿಗೆ ಹೇಳಿ ಅವರನ್ನು ರಂಜಿಸಿ, ಆ ಮೂಲಕ ಮಕ್ಕಳ ಮನಸ್ಸನ್ನು ಪ್ರಫುಲ್ಲವಾಗಿಡುವ ಕಾರ್ಯವನ್ನು ಮಾಡಬಹುದು.

## ಮಕ್ಕಳ ಶಿಕ್ಷಣದಲ್ಲಿ ಆಸಕ್ತಿ

ಸಿಗುವಂತಹ ಕಡಿಮೆ ಅವಧಿಯಲ್ಲಿಯೆ, ಮಕ್ಕಳ ಶಿಕ್ಷಣದ

ಬಗ್ಗೆಯೂ, ತಂದೆ ಆಸಕ್ತಿ ವಹಿಸಬಹುದು. ಕೆಲವರಿಗೆ ನಿತ್ಯವೂ ಮಕ್ಕಳಿಗೆ ನಿಗಧಿಪಡಿಸಿದ ಅವಧಿಯಲ್ಲಿ ಪಾಠ ಹೇಳಿಕೊಡುವಷ್ಟು ವೇಳೆ ಇದ್ದರೆ, ಇನ್ನು ಕೆಲವರಿಗೆ ಬಿಡುವು ಸಿಗುವುದೇ ಕಷ್ಟವೆನಿಸಬಹುದು. ಆದರೆ ಸಿಗುವ ಕಾಲವನ್ನೇ ಸರಿಯಾಗಿ ಉಪಯೋಗಿಸಿಕೊಳ್ಳಬೇಕಾದ ಆವಶ್ಯಕತೆ ಇದೆ. ಮನೆಯಲ್ಲಿರುವ ಅವಧಿ, ತಿಂಡಿ ತಿನ್ನುವ ವೇಳೆ, ಊಟ ಮಾಡುವ ವೇಳೆ ಅಥವಾ ಮಕ್ಕಳಿಗೆ ಮತ್ತಾವುದೇ ರೀತಿಯಲ್ಲಿ ನೆರವಾಗುವ ವೇಳೆಯಲ್ಲಿ ಶಾಲೆಯ ಬೋಧನ ವಿಷಯಕ್ಕೆ ಸಂಬಂಧಪಟ್ಟಂತೆ ಹಾಗೂ ಸಾಮಾನ್ಯ ತಿಳಿವಳಿಕೆಯ ಬಗೆಗೆ ಪ್ರಶ್ನೆಗಳನ್ನು ಕೇಳುವುದು, ತಪ್ಪುಗಳನ್ನು ತಿದ್ದುವುದು, ಸೂಕ್ತ ತಿಳಿವಳಿಕೆಯನ್ನು ಕೊಡುವುದು ಸಾಧ್ಯ. ತಂದೆಯ ಶಿಕ್ಷಣ ಮತ್ತು ಅನುಭವದ ಫಲ, ಮಕ್ಕಳಿಗೆ ಶೀಘ್ರವಾಗಿ ತಲುಪಲು ಇದೊಂದು ಸುಲಭ ಮಾರ್ಗವಲ್ಲವೆ ?

ಮಕ್ಕಳಿಗೆ ವಿದ್ಯಾಭ್ಯಾಸದಲ್ಲಿ ಆಸಕ್ತಿ ಮೂಡುವ ಹಾಗೆ ಆಕರ್ಷಣೆಗಳನ್ನು ತೋರಿಸಬಹುದು. ಮಕ್ಕಳ ಅನೇಕ ಬೇಡಿಕೆಗಳನ್ನು ನಿಧಾನವಾಗಿ, ಹಂತ ಹಂತವಾಗಿ ಪೂರೈಸುತ್ತಾ ಬರುವುದು ಒಳ್ಳೆಯದು. ಮಕ್ಕಳು ಕೇಳಿದ್ದನ್ನೆಲ್ಲಾ ಒಮ್ಮೆಲೇ ಕೊಡಿಸುತ್ತಾ ಹೋದ ಪಕ್ಷದಲ್ಲಿ, ಇನ್ನೂ ಹೆಚ್ಚಿನ ಬೇಡಿಕೆಗಳನ್ನು ಮುಂದೊಡ್ಡುವ ಸಾಧ್ಯತೆ ಇದೆ. ಅವಕ್ಕಾಗಿ ಹಠ ಪ್ರಾರಂಭವಾಗಬಹುದು, ಹಾಗೂ ಬೇಕೆನಿಸಿದ್ದೆಲ್ಲಾ ಸಿಗುತ್ತದೆ ಎನ್ನುವ ಭಾವನೆ ಬೆಳೆಯಬಹುದು. ಇದು ಮಗುವಿನ ಉತ್ತಮ ಭವಿಷ್ಯಕ್ಕೆ ಅಷ್ಟೊಂದು ಒಳಿತಲ್ಲ. ಮಕ್ಕಳ ಆವಶ್ಯಕ ಬೇಡಿಕೆಗಳನ್ನು ಪೂರೈಸಬೇಕು. ಆದರೆ ಒಮ್ಮೆಲೆ ಅಲ್ಲ. ಹಾಗೂ ಪ್ರತಿ ಬೇಡಿಕೆಯ ಸಂದರ್ಭವನ್ನೂ, ಮಕ್ಕಳು ತಮ್ಮ ಕರ್ತವ್ಯಗಳಲ್ಲಿ ನಿರತವಾಗುವಂತೆ ಪ್ರೋತ್ಸಾಹಿಸಲು ಬಳಸುವುದು ಒಳ್ಳೆಯದು.

ಮಕ್ಕಳು ಬೆಳೆದ ಹಾಗೆ ಅನೇಕ ವಿಷಯಗಳ ಬಗೆಗೆ ಪ್ರಶ್ನೆಗಳನ್ನು ಕೇಳುವುದು ಅತ್ಯಂತ ಸಹಜ. ಹೊಸ ವಿಷಯಗಳ ಬಗೆಗೆ ತಿಳಿದುಕೊಳ್ಳಬೇಕೆಂಬ ಬಯಕೆ ಚಿಮ್ಮುತ್ತಿರುತ್ತದೆ. ಹಿರಿಯರಿಗೆ ಅನೇಕ ವೇಳೆ

ಬೇಸರ ಬರುವಷ್ಟರಮಟ್ಟಿಗೆ, ಅದು ಏಕೆ, ಇದು ಹೇಗೆ ಎಂಬ ಪ್ರಶ್ನೆಗಳ ಮಳೆಯನ್ನೇ ಸುರಿಸುತ್ತಾರೆ. ಮಕ್ಕಳ ಕುತೂಹಲವನ್ನು ತಣಿಸುವ ಮತ್ತು ಪ್ರಶ್ನೆಗಳಿಗೆ ಸೂಕ್ತವಾದ ಉತ್ತರಗಳನ್ನು ಹೇಳುವ ಮಟ್ಟಿನ ತಾಳ್ಮೆ ಆವಶ್ಯಕ. ಕುತೂಹಲಕ್ಕಾಗಿ ಕೇಳುವ ಈ ಪ್ರಶ್ನೆಗಳು ಮಕ್ಕಳ ತೀಕ್ಷ್ಣ ಬುದ್ಧಿ, ಚುರುಕುತನವನ್ನು ಸೂಚಿಸುತ್ತವೆ. ಮಕ್ಕಳಲ್ಲಿ ಕಂಡುಬರುವ ಈ ಪ್ರವೃತ್ತಿಯನ್ನು ಮೊಟಕುಗೊಳಿಸುವುದರ ಬದಲು, ಅದನ್ನು ಪ್ರೋತ್ಸಾಹಿಸು ವುದರಲ್ಲಿಯೆ ಹೆಚ್ಚು ಶ್ರೇಯಸ್ಸು ಇದೆ.

ಮಕ್ಕಳು ಸ್ವಲ್ಪ ದೊಡ್ಡವರಾದ ಹಾಗೆ, ಮನೆಯ ಹೊರಗಡೆ ಸ್ಕೂಲಿನಲ್ಲಿ, ಸ್ನೇಹಿತರ ಜೊತೆ, ಹೇಗೆ ವರ್ತಿಸುತ್ತಾರೆ, ಯಾವ ಹವ್ಯಾಸ ಗಳಲ್ಲಿ ತೊಡಗುತ್ತಾರೆ, ಮತ್ತು ಶಾಲೆಗಳಲ್ಲಿ ಅವರ ಹಾಜರಾತಿಯ ಬಗೆಗೆ ಗಮನಿಸುತ್ತಿರಬೇಕು. ಮಕ್ಕಳನ್ನು ಶಾಲೆಗೆ ಸೇರಿಸಿದ ಮೇಲೆ ತಮ್ಮ ಜವಾಬ್ದಾರಿ ಮುಗಿಯಿತು ಎನ್ನುವ ಧೋರಣೆ ಒಳ್ಳೆಯದಲ್ಲ. ವಾಸ್ತವ ವಾಗಿ ಹಿರಿಯರ ಮೇಲ್ವಿಚಾರಣೆ ಮಕ್ಕಳು ಕಾಲೇಜಿಗೆ ಸೇರಿದಾಗಲೂ ಇರಬೇಕು.

## "ಗಂಡಹೆಂಡಿರ ಜಗಳದಲ್ಲಿ ..........."

ಮನೆಯ ಹಿರಿಯರು ಸಿಟ್ಟಿಗೇಳುವ ಮತ್ತು ತಾಳ್ಮೆ ಕಳೆದು ಕೊಳ್ಳುವ ಸನ್ನಿವೇಶಗಳು ಹಲವಾರು. ಹಾಗೂ ಕಾರಣಗಳು ಹಲವಾರು. ತಂದೆ ಮತ್ತು ತಾಯಿ, ಅನೇಕ ಸಂದರ್ಭಗಳಲ್ಲಿ ತಾಳ್ಮೆಗೆಟ್ಟು ಸಿಟ್ಟಿನಲ್ಲಿ ವರ್ತಿಸುವ ಸ್ಥಿತಿ ಕಂಡುಬರುತ್ತದೆ. ಅಂತೆಯೆ, ಮನೆಯಲ್ಲಿನ ಯಾವುದೇ ಪ್ರಕರಣ ಅಥವಾ ಮನೆಯ ಹೊರಗಿನ ವ್ಯವಹಾರದಲ್ಲಿ ಯಾವುದೇ ಅಹಿತಕರ ಘಟನೆ, ಹೀಗೆ, ತಂದೆ ಹಲವಾರು ಕಾರಣಗಳಿಂದ ಬೇಸರಗೊಂಡು ಹಲವು ವೇಳೆ ಸಿಟ್ಟಿನಲ್ಲಿ ವರ್ತಿಸುವ ಪರಿಸ್ಥಿತಿಯುಂಟು. ಇಂತಹ ಎಲ್ಲ ಪ್ರಕರಣಗಳಲ್ಲಿ, ಮುಗ್ಧ ಮಕ್ಕಳು, ಹಿರಿಯರ ಕೋಪದ ತಾಪವನ್ನು ಅನುಭವಿಸಬೇಕಾಗುತ್ತದೆ.

ನೆಮ್ಮದಿ ಕಳೆದುಕೊಂಡ ತುದೆ, ಮಕ್ಕಳನ್ನು ವಿನಾಕಾರಣ ಗದರಿಸುವುದು, ಸಣ್ಣಪುಟ್ಟ ಕಾರಣಗಳಿಗೂ ಸಿಡಿದೇಳುವುದು ಮತ್ತು ಸಿಟ್ಟಿನ ಭರದಲ್ಲಿ ಮಕ್ಕಳನ್ನು ಹೊಡೆಯುವುದು ಸ್ವಲ್ಪ ಸ್ವಾಭಾವಿಕವೇ ಸರಿ. ಹೆಂಡತಿಯ ಮೇಲಿನ ಸಿಟ್ಟು, ಮನೆಯ ಯಾವುದೇ ಘಟನೆಯಿಂದ ಸಿಟ್ಟು, ಮನೆಯ ಹೊರಗಡೆ ಆಫೀಸಿನಲ್ಲಿ, ಹೊಲಗದ್ದೆಯಲ್ಲಿ, ತಾನು ಕೆಲಸ ಮಾಡುವ ಕ್ಷೇತ್ರದಲ್ಲಿ, ಪೇಟೆಯಲ್ಲಿ ಸಂಭವಿಸಿದಂತಹ ಅಹಿತಕರ ಘಟನೆ ಅಥವಾ ಸ್ನೇಹಿತರೊಂದಿಗೆ ನಡೆದ ಮಾತಿನ ಚಕಮಕಿ ಇತ್ಯಾದಿ ಹಲವಾರು ಕಾರಣಗಳಿಂದ, ಬೇಸರಗೊಂಡು ಮನೆಗೆ ಹಿಂದಿರುಗುವ ತಂದೆಯ ಸಿಟ್ಟಿಗೆ ಬಹಳ ಸುಲಭವಾಗಿ ಬಲಿಯಾಗುವವರೆಂದರೆ ಮಕ್ಕಳು. ಯಾರದೋ ಮೇಲಿನ ಸಿಟ್ಟಿನ ಫಲವಾಗಿ ಪೆಟ್ಟು ತಿಂದು, ಮಕ್ಕಳು ಖಿನ್ನಮನಸ್ಕರಾಗುವುವನ್ನು ತಪ್ಪಿಸುವ ಹೊಣೆ ಹಿರಿಯರ ಮೇಲಿದೆ.

ಮನೆ ಸೇರಿದ ಮೇಲೆ, ತಂದೆ ಹೊರಗಿನ ಎಲ್ಲ ಬೇಸರ, ಸಿಟ್ಟನ್ನೂ ಸಾಧ್ಯವಾದ ಮಟ್ಟಿಗೆ ಮರೆತು, ಮಕ್ಕಳೊಂದಿಗೆ ಆತ್ಮೀಯವಾಗಿ ವರ್ತಿಸಬೇಕಾದುದನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ಮನೆಯ ವ್ಯವಹಾರದಲ್ಲಿ ಬೇಸರಗೊಂಡಿದ್ದರೂ ಸಹ, ತಂದೆ ತಾಯಿ ಇಬ್ಬರೂ ಮಕ್ಕಳೊಡನೆ ಗೆಲುವಿನೊಂದಿಗೆ ವ್ಯವಹರಿಸಬೇಕಾದುದನ್ನು ಮರೆಯಲಾಗದು.

## ಶಿಕ್ಷೆ

ಮಕ್ಕಳನ್ನು ಶಿಕ್ಷಿಸುವುದು ಸರಿಯೆ ? ಬಹುಶಃ ಈ ಪ್ರಶ್ನೆಗೆ ಕೆಲವರು ಸರಿ ಎಂದರೆ, ಇನ್ನು ಕೆಲವರು ತಪ್ಪು ಎನ್ನಬಹುದು. ಪ್ರೀತಿ, ವಾತ್ಸಲ್ಯಗಳಿಂದ ಮಕ್ಕಳನ್ನು ತಿದ್ದಬೇಕು ಮತ್ತು ಬೆಳೆಸಬೇಕು ಎನ್ನುವುದರ ಬಗೆಗೆ ಎರಡು ಮಾತಿಲ್ಲ. ಆದರೆ ಶಿಕ್ಷೆಯೂ ಹಲವೊಮ್ಮೆ ಅನಿವಾರ್ಯವೆನ್ನುವುದನ್ನು ತಳ್ಳಿಹಾಕುವಂತಿಲ್ಲ. ಯಾವುದು ಅತಿಯಾದರೂ ಕೆಡುಕು ಖಂಡಿತ. ಅಂತೆಯೆ ಅತಿಯಾದ ಪ್ರೀತಿ ವಾತ್ಸಲ್ಯದಲ್ಲಿ ಬೆಳೆದ ಮಗು, ನಿರ್ಭಯತನ, ಉದ್ಧಟತನ, ಮೊಂಡತನ ಹಾಗೂ ಅಡ್ಡಹಾದಿ ಹಿಡಿಯ

ಬಹುದಾದ ಸಾಧ್ಯತೆ ಇಲ್ಲದೆ ಇಲ್ಲ. ಆವಶ್ಯವೆನಿಸಿದಾಗ ಮಾತ್ರ ಕೊಡುವ ಶಿಕ್ಷೆ, ಬೆಳೆಯುವ ಮನಸ್ಸಿನ ಮೇಲೆ ಉತ್ತಮ ಪರಿಣಾಮವನ್ನೆ ಉಂಟು ಮಾಡಬಲ್ಲದು.

ಮಕ್ಕಳಿಗೆ ಕೊಡುವ ಶಿಕ್ಷೆ, ಅವರ ನಡೆನುಡಿಯನ್ನು ತಿದ್ದುವಲ್ಲಿ ಬಳಸಬಹುದಾದ ಸಾಧನ ಮಾತ್ರ. ಆ ಕಾರಣದಿಂದ ಸಣ್ಣಪುಟ್ಟ ಕಾರಣ ಗಳಿಗೆಲ್ಲ ಪದೇ ಪದೇ ಶಿಕ್ಷಿಸುವುದೇ ಆಗಲಿ, ಅಥವಾ ಅತಿ ಕ್ರೂರವಾಗಿ ಶಿಕ್ಷಿಸುವುದೇ ಆಗಲಿ ಸರಿಯಲ್ಲ. ಯಾವ ಸಂದರ್ಭದಲ್ಲಿ ಶಿಕ್ಷೆ ಅನಿವಾರ್ಯ ಹಾಗೂ ಶಿಕ್ಷೆ ಎಷ್ಟರ ಮಟ್ಟಿಗೆ ಇರಬೇಕು ಎನ್ನುವುದನ್ನು ಸಂದರ್ಭಕ್ಕನು ಗುಣವಾಗಿ ಹಿರಿಯರೇ ನಿರ್ಧರಿಸಬೇಕು.

ಮಕ್ಕಳಿಗೆ ಶಿಕ್ಷೆಯನ್ನು ವಿಧಿಸುವಾಗ ಹಲವು ಅಂಶಗಳನ್ನು ಗಮನ ದಲ್ಲಿಟ್ಟುಕೊಂಡಿರುವುದು ಒಳಿತು. ಮಗು ಯಾವುದೇ ಒಂದು ತಪ್ಪು ಕೆಲಸವನ್ನು ಮಾಡಿದಾಗ ಅಥವಾ ಕೆಟ್ಟ ಮಾತನ್ನು ಪದೇ ಪದೇ ಆಡಿ ದಾಗ, ಸಾಧ್ಯವಾದ ಮಟ್ಟಿಗೆ ಅದರ ನೆನಪು ಮಗುವಿನ ಮನಸ್ಸಿನಲ್ಲಿ ಉಳಿದಿರುವ ಅವಧಿಯಲ್ಲಿಯೇ ಆವಶ್ಯವೆನಿಸಿದ ಶಿಕ್ಷೆಯನ್ನು ವಿಧಿಸಬೇಕು. ಯಾವ ತಪ್ಪಿಗಾಗಿ ಈ ಶಿಕ್ಷೆ ಎನ್ನುವ ಅರಿವು ಮಗುವಿಗೆ ಉಂಟಾಗಬೇಕು ಎನ್ನುವುದೇ ಇದರ ಉದ್ದೇಶ. ಎರಡನೆಯದಾಗಿ, ಸಿಟ್ಟಿನ ಭರದಲ್ಲಿ ಮಕ್ಕ ಳನ್ನು ಶಿಕ್ಷಿಸುವಾಗ ವಿಶೇಷ ಎಚ್ಚರಿಕೆಯನ್ನು ವಹಿಸಬೇಕು; ಕೈಗೆ ತಕ್ಷಣ ಸಿಕ್ಕ ವಸ್ತುವಿನಿಂದ ಹೊಡೆಯುವುದು, ಮಗುವಿನ ಅಪಾಯಕಾರೀ ಸ್ಥಳ ಗಳಿಗೆ ಹೊಡೆಯುವುದು, ಅನರ್ಥಕ್ಕೆಡೆಯಾಗಬಹುದು. ಸಿಟ್ಟಿನಲ್ಲಿ ಕಪಾ ಳಕ್ಕೆ ಹೊಡೆದಾಗ, ಮಗು ಎಚ್ಚರ ತಪ್ಪಬಹುದು. ಕಿವಿಯ ಗ್ರಹಣ ಶಕ್ತಿಯ ಮೇಲೆ ಕೆಟ್ಟ ಪರಿಣಾಮವುಂಟಾಗಬಹುದು, ಮೆದುಳಿನ ಕೇಂದ್ರಕ್ಕೆ ಧಕ್ಕೆಯುಂಟಾಗಬಹುದು. ಅಂತೆಯೆ ಕೆನ್ನೆ, ಹೊಟ್ಟೆ, ಪಕ್ಕೆ, ಮರ್ಮ ಸ್ಥಳಗಳಿಗೆ ಹೊಡೆಯುವುದು ಅಪಾಯಕರ. ಕಿವಿ ಹಿಂಡುವುದು, ಕೈ ಮತ್ತು ಕಾಲುಗಳ ಮೇಲೆ ಹೊಡೆಯುವುದು ಉತ್ತಮ. ಉಗ್ರ ಶಿಕ್ಷೆ ಮಕ್ಕಳ ಮನಸ್ಸಿನ ಮೇಲೆ ಕೆಟ್ಟ ಪರಿಣಾಮವನ್ನು ಉಂಟುಮಾಡುತ್ತದೆ ಎನ್ನುವ

ದನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ಶಿಕ್ಷೆಯಿಂದ ಸಾಧಿಸಲಾಗದ ಪರಿವರ್ತನೆ ಮತ್ತು ಸುಧಾರಣೆಯನ್ನು ಪ್ರೀತಿ ವಾತ್ಸಲ್ಯಗಳಿಂದ ಸಾಧಿಸಬಹುದು. ಅಂದರೆ ಮಕ್ಕಳನ್ನು ಅಂಕೆಯಲ್ಲಿಟ್ಟುಕೊಂಡಿರುವ ಉದ್ದೇಶದಿಂದ ಅನಿವಾರ್ಯವೆನಿಸಿದ ಪ್ರಮಾಣದ ಶಿಕ್ಷೆಯನ್ನು ಬಳಸುವಲ್ಲಿ ಹಿರಿಯರು ಎಚ್ಚರವಹಿಸಬೇಕು.

## ಪೌರ ಪ್ರಜ್ಞೆ

ಉತ್ತಮ ಪ್ರಜೆಯಲ್ಲಿರಬೇಕಾದ ಲಕ್ಷಣಗಳನ್ನು ಬೆಳೆಯುವ ಮಕ್ಕಳಲ್ಲಿ ಮೂಡಿಸುವ ಪ್ರಯತ್ನ ನಡೆಯಬೇಕು. ಶೌಚಗೃಹಗಳನ್ನು ಉಪಯೋಗಿಸಬೇಕಾದ ರೀತಿಯಿಂದ ಹಿಡಿದು ಸಾರ್ವಜನಿಕ ಆಸ್ತಿಪಾಸ್ತಿಗಳ ಬಗೆಗೆ ಎಚ್ಚರವಹಿಸಬೇಕಾದ ಹಂತದವರೆಗೆ ಹಲವಾರು ವಿಷಯಗಳ ಬಗ್ಗೆ ಮಕ್ಕಳಿಗೆ ಕ್ರಮೇಣ ತಿಳಿವಳಿಕೆಯನ್ನು ಮೂಡಿಸುವುದು ಆವಶ್ಯಕ. ಮನೆಯ ಹಿರಿಯರು ಸಂದರ್ಭಕ್ಕೆ ಅನುಗುಣವಾಗಿ ಒಳ್ಳೆಯ ಅಭ್ಯಾಸಗಳ ಬಗ್ಗೆ ತಿಳಿವಳಿಕೆಯನ್ನು ಕೊಡುತ್ತಿರಬೇಕು. ಉದಾಹರಣೆಗಾಗಿ ಹಲವನ್ನು ಮಾತ್ರ ಇಲ್ಲಿ ಕೊಡಬಹುದಷ್ಟೆ.

ಶೌಚಗೃಹಗಳನ್ನು ಉಪಯೋಗಿಸುವ ಬಗೆಗೆ ಮಕ್ಕಳಿಗೆಂತಹ ತಿಳಿವಳಿಕೆಯನ್ನು ಕೊಡುವುದು ಎಂದು ಹಲವರು ಪ್ರಶ್ನಿಸಬಹುದು. ಶೌಚಗೃಹಗಳ ಗೋಡೆಯ ಸುತ್ತ ಅಥವಾ ಬಾಗಿಲಿನಲ್ಲಿ ನಿಂತು ಒಳಗಿನ ಮೆಟ್ಟಲು ಮತ್ತು ಎಲ್ಲೆಡೆಯೂ ಮೂತ್ರ ವಿಸರ್ಜನೆ ಮಾಡುವ ಪ್ರವೃತ್ತಿ ಸರಿಯೆ ? ಮಲ ವಿಸರ್ಜನೆ ಮಾಡಿ ನಂತರ ಧಾರಾಳವಾಗಿ ನೀರು ಹೊಯ್ದು ಅದು ಕೊಚ್ಚಿ ಹೋಗುವ ಹಾಗೆ ಮಾಡದೆ ಬರುವುದು ಸರಿಯೆ ? ಇಂತಹ ಅಭ್ಯಾಸಗಳಿಂದ ಶೌಚಗೃಹಗಳು ಅಸಹ್ಯವಾಗುವುದಿಲ್ಲವೆ ? ಹೊಲಸು ವಾಸನೆ ಬರುವುದಿಲ್ಲವೆ ರೋಗಗಳಿಗೆ ಕಾರಣವಾಗುವುದಿಲ್ಲವೆ ಹಾಗೂ ಇತರರಿಗೆ ಹೇಸಿಗೆಯಾಗುವುದಿಲ್ಲವೆ ? ಇಂತಹ ಅಭ್ಯಾಸಗಳ ಬಗೆಗೆ ಹಿರಿಯರೂ ಸೇರಿದಂತೆ ಎಷ್ಟು ಜನ ಯೋಚನೆ ಮಾಡಿ ಅದರಂತೆಯೆ ನಡೆದುಕೊಳ್ಳುತ್ತಿದ್ದಾರೆ ಎಂದು ಎಲ್ಲರೂ ಚಿಂತಿಸಬೇಕಾಗಿದೆ. ಮನೆಯಲ್ಲಿನ

ಶೌಚಗೃಹಗಳನ್ನು ಒಳ್ಳೆಯ ರೀತಿಯಲ್ಲಿ ಉಪಯೋಗಿಸುವಂತೆಯೇ, ಸಾರ್ವಜನಿಕ ಕಟ್ಟಡಗಳ ಸುತ್ತಮುತ್ತ ಹಾಗೂ ಪ್ರದೇಶಗಳಲ್ಲಿ ಸಾಧ್ಯವಾದ ಮಟ್ಟಿಗೆ ಹೊಲಸು ಮಾಡದಂತೆ ತಿಳಿಸಬೇಕು.

ಮುಖ್ಯವಾಗಿ ಹಳ್ಳಿಗಳಲ್ಲಿ ಹಾಗೂ ಪಟ್ಟಣಗಳ ಹಲವೆಡೆಗಳಲ್ಲಿ ಗಮನಿಸಬಹುದಾದ ಮತ್ತೊಂದು ಅಭ್ಯಾಸವೆಂದರೆ, ಮನೆಯೆದುರು, ಬೀದಿಯಲ್ಲಿ ಮಲವಿಸರ್ಜನೆಗೆ ಮಕ್ಕಳನ್ನು ತಂದೆತಾಯಿಯೆ ಪ್ರೋತ್ಸಾಹಿಸುವುದು. ಸಾರ್ವಜನಿಕ ನೈರ್ಮಲ್ಯಗಳ ಬಗೆಗೆ ತಿಳಿವಳಿಕೆಯನ್ನು ಮೂಡಿಸಬೇಕಾದ ವಯಸ್ಸಿನಲ್ಲಿ ಮಕ್ಕಳನ್ನು ಹೀಗೆ ಪ್ರೋತ್ಸಾಹಿಸುವುದು ಉಚಿತವಲ್ಲ. ಇದು ಮಕ್ಕಳಲ್ಲಿ ನೈರ್ಮಲ್ಯ ನಿಯಮಗಳ ಬಗೆಗೆ ಅಲಕ್ಷ್ಯ ಭಾವವನ್ನು ಮೂಡಿಸುವುದಲ್ಲದೆ, ಸಾರ್ವಜನಿಕ ಆರೋಗ್ಯ ಮತ್ತು ನಗರ ಸೌಂದರ್ಯಕ್ಕೆ ಧಕ್ಕೆಯೆನಿಸುತ್ತದೆ. ಅಂತೆಯೆ ಸೂಕ್ತ ಎಚ್ಚರಿಕೆಯನ್ನು ಹಿರಿಯರು ವಹಿಸಬೇಕು.

ರಸ್ತೆಯ ಮಧ್ಯೆ ಓಡಾಡುವುದರಿಂದ ಅಪಘಾತಗಳಾಗುವ ಸಾಧ್ಯತೆ ಹೆಚ್ಚು. ಆದ್ದರಿಂದ ರಸ್ತೆಯ ಒಂದು ಬದಿಯಲ್ಲಿ ಓಡಾಡಬೇಕಾದ ಅವಶ್ಯಕತೆ ಮತ್ತು ಸಾರ್ವಜನಿಕ ಪ್ರದೇಶಗಳಲ್ಲಿ ಅಥವಾ ಇತರರ ಮನೆಗೆ ಹೋದಾಗ ಜಾಣ ಮಕ್ಕಳಂತೆ ಹೇಗೆ ನಡೆದುಕೊಳ್ಳಬೇಕು ಎನ್ನುವುದರ ಬಗೆಗೆ ತಿಳಿವಳಿಕೆಯನ್ನು ಕೊಡಬೇಕು. ಸ್ನೇಹಿತರು ಹಾಗೂ ಇತರರಿಗೆ ಕೆಡುಕನ್ನು ಅಥವಾ ತೊಂದರೆಯನ್ನು ಉಂಟುಮಾಡದ ರೀತಿಯಲ್ಲಿ ನಡೆದುಕೊಳ್ಳುವುದರ ಜೊತೆಗೆ, ಸಾಧ್ಯವಾದ ಮಟ್ಟಿಗೆ ಇತರರಿಗೂ ಒಳಿತಾಗುವ ರೀತಿಯಲ್ಲಿ ನಡೆದುಕೊಳ್ಳಬೇಕೆಂದು ತಿಳಿಸಿ ಹೇಳಬಹುದು.

ಬಡವರಾಗಲಿ ಅಥವಾ ಮನೆಯ ಕೆಲಸದವರೇ ಆಗಲಿ, ಅವರನ್ನು ಸಭ್ಯತೆ ಮತ್ತು ನಮ್ರತೆಯೊಂದಿಗೆ ಮಾತನಾಡಿಸಬೇಕು ಹಾಗೂ ವರ್ತಿಸಬೇಕು. ಯಾವ ಕೆಲಸವೂ ಕೀಳಲ್ಲ; ಆದ್ದರಿಂದ ಯಾವುದೇ ಒಂದು ಕೆಲಸವನ್ನು ಮಾಡುವುದರಿಂದ ಕುಂದುಂಟಾಗುತ್ತದೆ ಎಂದು ಭಾವಿಸುವುದು ತಪ್ಪು. ಪಾರ್ಕ್, ಸಾರ್ವಜನಿಕ ಸ್ಥಳ ಮತ್ತು ಆಸ್ತಿಪಾಸ್ತಿಗಳು ಎಲ್ಲರಿಗೂ

ಸೇರಿದಂತಹವು, ಅವುಗಳನ್ನು ಹಾಳು ಮಾಡಬಾರದು. ಹೀಗೆ ಜೀವನದ ಅನೇಕ ವಿಷಯುಗಳ ಬಗೆಗೆ ಸಂದರ್ಭಕ್ಕನುಗುಣವಾಗಿ ಸೂಕ್ತ ತಿಳಿವಳಿಕೆಯನ್ನು ಮಕ್ಕಳಲ್ಲಿ ಕ್ರಮೇಣ ಮೂಡಿಸುತ್ತಿರಬೇಕು. ಹಂತ ಹಂತವಾಗಿ ಉತ್ತಮ ವೌಲ್ಯಗಳನ್ನು ಮೈಗೂಡಿಸಿಕೊಂಡ ಮಗು, ದೊಡ್ಡವನಾದ ಮೇಲೆ ಉತ್ತಮ ಪ್ರಜೆಯಾಗಬಲ್ಲ.

## ಹಿಂಸಾ ಪ್ರವೃತ್ತಿಗೆ ತಡೆ

ಯಾವ ವರ್ತನೆ ಸರಿ ಅಥವಾ ಯಾವುದು ತಪ್ಪು ಎನ್ನುವ ಬಗೆಗೆ ತಿಳಿವಳಿಕೆಯಿಲ್ಲದೆ, ಹಿಂಸಾ ಪ್ರವೃತ್ತಿಯೂ ಸೇರಿದಂತೆ, ಎಲ್ಲ ರೀತಿಯ ಚಟುವಟಿಕೆಗಳಲ್ಲಿ ಮಕ್ಕಳು ತೊಡಗುವುದು ಸಹಜ. ಹಿಂಸಾ ಪ್ರವೃತ್ತಿ ಮಕ್ಕಳಿಗೆ ಒಂದು ರೀತಿಯ ಆನಂದವನ್ನು ಕೊಡುತ್ತದೆ. ಬಹುಶಃ ಇದೇ ಕಾರಣಕ್ಕೆ ಮಕ್ಕಳು ನಾನಾ ರೀತಿಯ ಹಿಂಸೆಯಲ್ಲಿ ತೊಡಗುತ್ತಾರೆ. ಸಣ್ಣ ಪುಟ್ಟ ಹುಳುಗಳನ್ನು ಹಿಡಿದು ಜಜ್ಜಿ ಹಿಂಸಿಸುವುದು, ನೀರಿಲ್ಲಿರುವ ಕಪ್ಪೆಗಳಿಗೆ ಕಲ್ಲು ಹೊಡೆಯುವುದು, ದಾರಿಯಲ್ಲಿ ಹೋಗುತ್ತಿರುವ ನಾಯಿಗೆ ಕಲ್ಲು ಬೀರುವುದು, ಹಕ್ಕಿಗಳಿಗೆ ಹೊಡೆಯುವುದು ಹಾಗೂ ಇತರ ಪ್ರಾಣಿಗಳನ್ನು ಹಿಂಸಿಸುವುದು, ಇವೆಲ್ಲ ಮಕ್ಕಳಲ್ಲಿ ಮೊಳಕೆಯ ರೂಪದಲ್ಲಿರುವ ಹಿಂಸಾ ಪ್ರವೃತ್ತಿಯ ಲಕ್ಷಣಗಳು. ಇವುಗಳನ್ನು ಸೂಕ್ತ ತಿಳಿವಳಿಕೆಯ ಮೂಲಕ ತಿದ್ದುವುದು ಆವಶ್ಯಕ. ಹಿಂಸೆಯಿಂದ ಪ್ರಾಣಿಗಳಿಗೆ ತುಂಬ ನೋವಾಗುತ್ತದೆ. ಅಂತೆಯೆ ಮೂಕ ಪ್ರಾಣಿಗಳ ಬಗೆಗೆ ಕರುಣೆ, ದಯೆಯನ್ನು ತೋರಬೇಕೆಂದು ತಿಳಿಸಿ ಹೇಳಬೇಕು. ಪ್ರಾಣಿಗಳನ್ನು ಹಿಂಸಿಸುವ ಈ ಪ್ರವೃತ್ತಿಯನ್ನು ತಡೆಯದಿದ್ದ ಪಕ್ಷದಲ್ಲಿ ಕ್ರಮೇಣ ಅದು ಬೆಳೆದು, ಸುತ್ತಮುತ್ತಲಿನ ಜನ ಮತ್ತು ವಸ್ತುಗಳಿಗೆ ಹಾನಿಯುಂಟುಮಾಡುವ ಅಭ್ಯಾಸಕ್ಕೆ ಆಸ್ಪದವಾಗಬಹುದು. ಮಗು ಬೆಳೆದಂತೆ ಕಠಿಣ ಮನಸ್ಕನಾಗಬಹುದು, ನಿರ್ದಯಿಯಾಗಬಹುದು; ಹಾಗೂ ಹಿಂಸಾ ಚಟುವಟಿಕೆಗಳಲ್ಲಿ ಹೆಚ್ಚು ಆಸಕ್ತಿಯನ್ನು ಬೆಳೆಸಿಕೊಳ್ಳಬಹುದು. ಅಂತೆಯೆ, ಮೊಳಕೆಯಲ್ಲಿ ಅದನ್ನು ತಿದ್ದುವುದು ಆವಶ್ಯಕ.

## ಮಕ್ಕಳ ಅಪಹರಣ

ಮಗು ತಪ್ಪಿಸಿಕೊಂಡಿದೆ ಎನ್ನುವ ಬಗೆಗೆ ಆಗಾಗ್ಗೆ ಪತ್ರಿಕೆಗಳಲ್ಲಿ ಓದುತ್ತಿರುತ್ತೇವೆ. ರೇಡಿಯೋಗಳಲ್ಲಿಯೂ ಇಂತಹ ಪ್ರಕರಣಗಳಿಗೆ ಸಂಬಂಧಪಟ್ಟ ವಿಶೇಷ ಪ್ರಕಟಣೆಗಳನ್ನು ಕೇಳುತ್ತಿರುತ್ತೇವೆ. ಹಲವು ಪ್ರಕರಣಗಳಲ್ಲಿ ಹಿರಿಯರ ಬೇಜವಾಬ್ದಾರಿತನ ಅಥವಾ ನಿರ್ಲಕ್ಷ್ಯತನದಿಂದ ಮಕ್ಕಳು ತಪ್ಪಿಸಿಕೊಳ್ಳಬಹುದು. ಊರಿಂದ ಊರಿಗೆ ಪ್ರಯಾಣ, ದೊಡ್ಡ ಸಮಾರಂಭಗಳು, ಜಾತ್ರೆ, ವಸ್ತು ಪ್ರದರ್ಶನ ಇತ್ಯಾದಿ ಪ್ರದೇಶಗಳಲ್ಲಿ ಹಿರಿಯರ ಸ್ವಲ್ಪ ನಿರ್ಲಕ್ಷ್ಯತನವೂ ಮಕ್ಕಳು ತಪ್ಪಿಸಿಕೊಳ್ಳಲು ಕಾರಣವಾಗಬಹುದು. ಇನ್ನು ಕೆಲವು ಪ್ರಕರಣಗಳಲ್ಲಿ, ದುರುದ್ದೇಶದಿಂದ ಮಕ್ಕಳನ್ನು ಮೋಸಗೊಳಿಸಿ ಅಪಹರಿಸುವ ಪ್ರಯತ್ನಗಳು ನಡೆಯುತ್ತವೆ. ಶಾಲೆಗೆ ಹೋಗುವ ಮಕ್ಕಳು ಅಥವಾ ರಸ್ತೆಯಲ್ಲಿ ಓಡಾಡುವ ಮಕ್ಕಳಿಗೆ ಹಲವು ಆಕರ್ಷಣೆಗಳನ್ನು ತೋರಿಸಿ ಅಪಹರಿಸುವ ಪಕರಣಗಳ ಬಗ್ಗೆಯೂ ಹಿರಿಯರು ಎಚ್ಚರವಹಿಸಬೇಕು.

ಶಾಲೆಗೆ ಹೋಗುವ ಮಕ್ಕಳಿಗೆ ಈ ದಿಸೆಯಲ್ಲಿ ಹಲವು ಮುನ್ನೆಚ್ಚರಿಕೆಯ ಕ್ರಮಗಳ ಬಗೆಗೆ ತಿಳಿವಳಿಕೆಯನ್ನು ಕೊಡುವುದು ಸೂಕ್ತ. ಗುರುತು ಪರಿಚಯ ಇಲ್ಲದವರಿಂದ ಚಾಕಲೇಟ್, ಐಸ್‌ಕ್ಯಾಂಡೀ ಮತ್ತಿತರ ಆಕರ್ಷಕ ವಸ್ತುಗಳನ್ನು ತೆಗೆದುಕೊಳ್ಳಬಾರದು, ಹಾಗೂ ಅವುಗಳಿಗೋಸ್ಕರ ಕರೆದಲ್ಲಿಗೆ ಹೋಗಬಾರದು. ಪರಿಚಯವಿಲ್ಲದವರ ಸೈಕಲ್, ಸ್ಕೂಟರ್ ಮತ್ತು ಕಾರಿನಲ್ಲಿ ಕರೆದರೂ ಹೋಗಬಾರದು, ಶಾಲೆಗೆ ಹೋಗುವಾಗ ಮತ್ತು ಶಾಲೆಯಿಂದ ಬರುವಾಗ ಆದಷ್ಟು ಇತರ ಮಕ್ಕಳೊಂದಿಗೆ ಗುಂಪಿನಲ್ಲೇ ಬರಬೇಕು, ಇತ್ಯಾದಿ ವಿಷಯಗಳ ಬಗೆಗೆ ಮಕ್ಕಳಿಗೆ ತಿಳಿವಳಿಕೆಯನ್ನು ಕೊಡಬೇಕು. ಎಂತಹ ಸಂದರ್ಭಗಳಲ್ಲಿ ಹೇಗೆ ವರ್ತಿಸಬೇಕೆಂಬ ವಿಷಯದ ಬಗ್ಗೆಯೂ, ಉದಾಹರಣೆಗಳೊಂದಿಗೆ, ಜಾಣ್ಮೆ ಮತ್ತು ಧೈರ್ಯವನ್ನು ಅವರಲ್ಲಿ ತುಂಬಬೇಕು. ಇಷ್ಟಲ್ಲದೆ ಮಕ್ಕಳ ಓಡಾಟಗಳ ಮೇಲೆ ಹಿರಿಯರು ಸದಾ ಗಮನವಿಟ್ಟಿರಬೇಕು.

ಅಂದವಮಾತ್ರಕ್ಕೆ ಮಕ್ಕಳಿಗೆ ಅಧೈರ್ಯ ತುಂಬುವುದಾಗಲೀ ಅಥವಾ ಸಮಾಜದಲ್ಲಿ ಕೇವಲ ಮೋಸ, ಕಳ್ಳಕಾಕರೇ ತುಂಬಿದ್ದಾರೆ ಎನ್ನುವ ಅಭಿಪ್ರಾಯ ಬರುವಂತಾಗಲೀ ಮಾಡುವುದು ಸರಿಯಲ್ಲ. ಹಲವು ಮೋಸ ಪ್ರಕರಣಗಳು ಮತ್ತು ಆಗ ವಹಿಸಬೇಕಾದ ಎಚ್ಚರಿಕೆಯ ಬಗೆಗೆ ತಿಳಿವಳಿಕೆಯನ್ನು ಮನದಟ್ಟು ಮಾಡಿಸುವುದೇ ಮುಖ್ಯ ಉದ್ದೇಶ. ಅಂತೆಯೆ ಧೈರ್ಯ, ಸಾಹಸೀ ಪ್ರವೃತ್ತಿ ಮತ್ತು ಆತ್ಮ ವಿಶ್ವಾಸವನ್ನು ಬೆಳೆಸಿಕೊಳ್ಳುವಂತೆಯೂ ಪ್ರೋತ್ಸಾಹಿಸಬೇಕು. ನಿರುತ್ಸಾಹ, ಸೋಮಾರಿತನ ಮತ್ತು ಆಟ ಪಾಟಗಳಲ್ಲಿ ನಿರಾಸಕ್ತಿ, ಇತ್ಯಾದಿಗಳಿಗೆ ಆಸ್ಪದ ಕೊಡದಂತೆ, ಸದಾ ಯಾವುದಾದರೂ ಉತ್ತಮ ಚಟುವಟಿಕೆಯಲ್ಲಿ ತೊಡಗಿರುವಂತೆ ಪ್ರೋತ್ಸಾಹಿಸುವುದು ಮತ್ತು ಅಂತಹ ಅವಕಾಶಗಳನ್ನು ಕಲ್ಪಿಸಿಕೊಡುವುದು ಆವಶ್ಯಕ.

## ಮೋಸ ಮತ್ತು ಗಲಭೆಯ ಪ್ರಕರಣಗಳು

ಮೋಸದ ಪ್ರಕರಣಗಳು ಸಾಕಷ್ಟು ನಡೆಯುತ್ತಿರುತ್ತವೆ. ನಗರಗಳಲ್ಲಿನ ಮೋಸ ಪ್ರಕರಣಗಳಲ್ಲಿ ಬಳಸುವ ತಂತ್ರಗಳು ವೈವಿಧ್ಯಮಯ. ಹೊಸ ಹೊಸ ತಂತ್ರಗಳ ಬಳಕೆಯಿಂದ, ವಿದ್ಯಾವಂತರೆನಿಸಿದ ಮತ್ತು ತಿಳಿವಳಿಕಸ್ಥರೆನಿಸಿದ ಜನರೂ ಸಹ ಮೋಸ ಹೋಗುವ ಸಂದರ್ಭಗಳಿವೆ. ಮೋಸಗಾರರು ಮತ್ತು ಮೋಸದ ಪ್ರಕರಣಗಳ ಬಗೆಗೆ ಸಾಕಷ್ಟು ತಿಳಿವಳಿಕೆಯನ್ನು ಹೊಂದಿರದ ಮುಗ್ಧ ಜನರು, ಸಾಮಾನ್ಯವಾಗಿ ಮೋಸ ಪ್ರಕರಣಗಳಲ್ಲಿ ಪ್ರಮುಖ ಬಲಿಯೆನಿಸುತ್ತಾರೆ.

ಹೆಚ್ಚಿನ ಮಹಿಳೆಯರಿಗೆ ಮನೆಯ ಹೊರಗಿನ ಮೋಸ, ಕಪಟ, ನಂಬಿಕೆ ದ್ರೋಹಗಳ ಬಗೆಗೆ ಪರಿಚಯವಿರಲಾರದು. ಮಹಿಳೆಯಲ್ಲಿ ಶಿಕ್ಷಣ ಕಡಿಮೆ ಇರುವುದು, ಮನೆಯ ಹೊರಗಿನ ವ್ಯವಹಾರದ ಅನುಭವ ಕಡಿಮೆ ಇರುವುದು ಮತ್ತು ಯಾವುದೇ ಪರಿಸ್ಥಿತಿಯಲ್ಲಿ ಮೊದಲಿಗೇ ಅಧೈರ್ಯ ಹೊಂದುವುದು, ಮಹಿಳೆಯರು ಹೆಚ್ಚಿನ ಮೋಸದ ಪ್ರಕರಣಗಳಲ್ಲಿ ಬಲಿಯಾಗಲು ಕಾರಣವೆನಿಸಿವೆ.

ಸಾಧಾರಣವಾಗಿ ಸಂಭವಿಸಬಹುದಾದ ಕೆಲವು ಮೋಸ ಪ್ರಕರಣ ಬಗೆಗೆ ಸೂಕ್ತ ತಿಳಿವಳಿಕೆಯನ್ನು ಕೊಟ್ಟು, ಅಂತಹ ಸಂದರ್ಭಗಳಲ್ಲಿ ಎಚ್ಚರಿಕೆ ವಹಿಸಬೇಕಾದ ಆವಶ್ಯಕತೆಯನ್ನು ತಿಳಿಯಹೇಳುವುದು ಪತಿಯಹೊಣೆ. ಪತ್ನಿ ಅಶಿಕ್ಷಿತಳಾಗಿದ್ದು ಮೋಸ ಪ್ರಕರಣಗಳ ಬಗ್ಗೆ ಮುಗ್ಧಳಾಗಿದ್ದಲ್ಲಿ ಆಕೆಯನ್ನು ಜಾಗೃತ ವ್ಯಕ್ತಿಯನ್ನಾಗಿ ಮಾರ್ಪಡಿಸುವಲ್ಲಿ ಪತಿಯ ಜವಾಬ್ದಾರಿ ಅತಿ ಹೆಚ್ಚು.

### ಹಲವು ಪ್ರಕರಣಗಳು

ವೈವಿಧ್ಯಮಯವಾದ ಮೋಸದ ಪ್ರಕರಣಗಳಲ್ಲಿ ಹಲವನ್ನು

ಮಾತ್ರ ಇಲ್ಲಿ ಉದಾಹರಿಸುವ ಮೂಲಕ, ಇಂತಹ ಇತರ ಪ್ರಕರಣಗಳ ಬಗೆಗೆ ಊಹೆ ಮಾಡಲು ಅವಕಾಶ ಮಾಡಿಕೊಡಬಹುದು.

**ಒಂದು :** ಸಾಮಾನ್ಯವಾಗಿ ಮನೆಯಲ್ಲಿ ಮಹಿಳೆಯರೇ ಇರುವಂತಹ ಸಂದರ್ಭಕ್ಕಾಗಿ ಹಲವು ಮೋಸಗಾರರು ಹೊಂಚು ಹಾಕುವುದುಂಟು. ನಿಮ್ಮ ಪತಿಗೆ ರಸ್ತೆಯಲ್ಲಿ ಅಪಘಾತವಾಗಿದೆ, ತತ್‌ಕ್ಷಣ ಬನ್ನಿ ಎಂದು ಗಾಬರಿಯ ಧ್ವನಿಯಲ್ಲಿ ಒಬ್ಬ ಅಥವಾ ಹಲವರು ಅಪರಿಚಿತ ವ್ಯಕ್ತಿಗಳು ಬಂದು ಮನೆಯ ಮಹಿಳೆಗೆ ಹೇಳುತ್ತಾರೆ. ನಮ್ಮ ಜೊತೆಯಲ್ಲಿ ಬನ್ನಿ ಕರೆದುಕೊಂಡು ಹೋಗುತ್ತೇವೆ ಎನ್ನುತ್ತಾರೆ.

ಮತ್ತೊಂದು ಸಂದರ್ಭದಲ್ಲಿ, ಇದೆ ರೀತಿ, ನಿಮ್ಮ ಮಗ ಅಥವಾ ಮಗಳಿಗೆ ಅಪಘಾತವಾಗಿದೆ, ನಮ್ಮ ಜೊತೆ ಬನ್ನಿ ಎಂದು ಅಪರಿಚಿತರು ಆಗ್ರಹಪಡಿಸುತ್ತಾರೆ.

ಮೇಲಿನಂತಹ ಸಂದರ್ಭಗಳಲ್ಲಿ ಮನೆಯಾಕೆ ಅಪರಿಚಿತರೊಂದಿಗೆ ತಾನೊಬ್ಬಳೆ ತತ್‌ಕ್ಷಣ ಹೊರಡುವುದು ಸರಿಯೆ? ಒಂದುಕ್ಷಣ ಯೋಚಿಸದೇ ಹೇಳುವುದಾದರೆ, ಹಾಗೆ ಹೊರಡುವುದು ಸರಿ ಎನಿಸುತ್ತದೆ. ಕಾರಣ, ಪತಿ ಅಥವಾ ಮಕ್ಕಳ ಅಪಘಾತ ಯಾವ ಪತ್ನಿ ಅಥವಾ ತಾಯಿಗೆ ತಾನೇ ಸಿಡಿಲಿನ ಸುದ್ದಿಯಾಗಲಾರದು? ಸಹಜವಾಗಿಯೆ ಮನೆಯಾಕೆ ಅತ್ಯಂತ ಗಾಬರಿಗೊಂಡು, ತನ್ನ ಆತ್ಮೀಯರನ್ನು ಕಾಣುವ ತವಕದಲ್ಲಿ, ಅಪರಿಚಿತರೊಂದಿಗೆ ಹೋಗುವ ಸಾಧ್ಯತೆ ಕಂಡುಬರುತ್ತದೆ. ಅಂತಹ ಕ್ಷಣಗಳಲ್ಲಿ ಮನೆಯ ಬಗ್ಗೆಯೂ ಎಚ್ಚರವಹಿಸದೆ, ಮನೆಗೆ ಬೀಗವನ್ನೂ ಹಾಕದೆ ಗಾಬರಿಗೊಂಡು ಅಪಚಿತರೊಂದಿಗೆ ಹೋಗುವ ಪ್ರಕರಣಗಳೂ ಇವೆ.

ಆದರೆ ಹೆದರಿಕೆಯಲ್ಲಿ ಯೋಚನಾ ಶಕ್ತಿಯನ್ನು ಕಳೆದುಕೊಂಡು ಅಪರಿಚಿತರೊಂದಿಗೆ ಇದ್ದಕ್ಕಿದ್ದಂತೆ ಹೊರಡುವುದು ಸರಿಯಲ್ಲ. ಅಪರಿಚಿತರಲ್ಲಿ ಒಬ್ಬ, ಕಷ್ಟದಲ್ಲಿರುವವನ ಹಿತೈಷಿಯಂತೆ ಮನೆಯನ್ನು ನೋಡಿಕೊಳ್ಳುವ ನೆಪದಲ್ಲಿ ಅಲ್ಲಿಯೇ ಇದ್ದು ಮನೆಯ ಕಳ್ಳತನ ಮಾಡಬ

ಹುದು. ಮತ್ತೊಂದು ಸಂದರ್ಭದಲ್ಲಿ, ಹೀಗೆ ಅಪರಿಚಿತರ ಹಿಂದೆ ಹೋದ ಮಹಿಳೆಯನ್ನು ನಿರ್ಜನ ಪ್ರದೇಶಕ್ಕೆ ಕರೆದುಕೊಂಡು ಹೋಗಿ ಬೆದರಿಸಿ ಆಕೆಯ ಮಾನ ಮತ್ತು ಆಭರಣಗಳನ್ನು ಅಪಹರಿಸಬಹುದು.

ಇಂತಹ ಪ್ರಕರಣಗಳಲ್ಲಿ ವಿವೇಚನಾ ಶಕ್ತಿಯನ್ನು ಕಳೆದುಕೊಳ್ಳದೆ ವರ್ತಿಸುವುದು ಆವಶ್ಯಕ. ಆತ್ಮೀಯರೊಬ್ಬರು ಅಪಘಾತದಿಂದ ಸಾವಿಗೀಡಾಗಿದ್ದರೆ ಅಥವಾ ಅವರಿಗೆ ತೀವ್ರ ಪೆಟ್ಟು ತಗುಲಿದ್ದರೆ ಯಾರೂ ಹೋಗಿ ಅದನ್ನು ಸರಿಪಡಿಸಲಾಗುವುದಿಲ್ಲ. ಯಾವುದೇ ಅಪಘಾತವಾದರೂ ಸಾರ್ವಜನಿಕರಲ್ಲಿ ಹಲವರು ತತ್‌ಕ್ಷಣ ಅವರನ್ನು ಆಸ್ಪತ್ರೆಗೆ ಸಾಗಿಸುತ್ತಾರೆ. ಅಂದಮಾತ್ರಕ್ಕೆ ಅಪಘಾತದ ಸುದ್ದಿ ತಲುಪಿದಾಗ ತತ್‌ಕ್ಷಣ ಯಾರೂ ಹೋಗಬಾರದು ಎಂದು ಇದರ ಅರ್ಥವಲ್ಲ. ಆದರೆ ಮನೆಯಲ್ಲಿ ಮಹಿಳೆ ಮಾತ್ರ ಇದ್ದಾಗ, ಹಾಗೂ ಆಕೆಯನ್ನು ಬರುವಂತೆ ಕರೆದಾಗ, ಅಂತಹ ಮಹಿಳೆ ಯೋಚನೆ ಮಾಡಬೇಕು. ಅದರಲ್ಲಿಯೂ ಅಪರಿಚಿತರೊಂದಿಗೆ ಹೋಗುವಾಗ ಸ್ವಲ್ಪ ವಿವೇಚನೆ ಆವಶ್ಯಕ.

ಯಾವ ಸ್ಥಳದಲ್ಲಿ ಅಪಘಾತವಾಯಿತು ಮತ್ತು ಅವರು ಈಗ ಎಲ್ಲಿದ್ದಾರೆ ಅಥವಾ ಆಸ್ಪತ್ರೆಯಲ್ಲಿದ್ದಾರೆಯೆ ಎನ್ನುವುದನ್ನು ಅಪರಿಚಿತರಿಂದ ತಿಳಿದು, ಅವರನ್ನು ಕಳುಹಿಸಿದ ನಂತರ ತಾವೇ ಪ್ರತ್ಯೇಕವಾಗಿ ಅಲ್ಲಿಗೆ ಹೋಗುವುದು ಒಳಿತು. ಅಕ್ಕಪಕ್ಕದ ಮನೆಯ ಪರಿಚಯಸ್ಥರಿಗೆ ವಿಷಯವನ್ನು ತಿಳಿಸುವುದು ಮತ್ತು ಅವರ ಪೈಕಿ ಯಾರನ್ನಾದರೂ ಜೊತೆಯಲ್ಲಿ ಕರೆದುಕೊಂಡು ಹೋಗುವುದು ಒಳಿತು. ಅಕ್ಕಪಕ್ಕದ ಜನರಿಗೆ ವಿಷಯ ತಿಳಿಯುವುದರಿಂದ, ಅವರು ಮನೆಯ ಕಡೆ ಗಮನ ಇಟ್ಟುಕೊಳ್ಳಲು ಸಾಧ್ಯವಾಗುತ್ತದೆ. ಹಾಗೂ ಪರಿಚಯಸ್ಥರ ಜೊತೆ ಹೋಗುವುದರಿಂದ, ಸುಳ್ಳು ಸುದ್ದಿ ಅಥವಾ ಮೋಸದ ಪ್ರಕರಣವಾಗಿದ್ದ ಪಕ್ಷದಲ್ಲಿ, ಸಂಭವಿಸಬಹುದಾಗಿದ್ದ ಒಂದು ಅನಾಹುತವನ್ನು ತಪ್ಪಿಸಿದಂತಾಗುತ್ತದೆ.

**ಎರಡು :** ಭವಿಷ್ಯ ನುಡಿಯುವ ಮತ್ತು ಶುಭಕೋರುವ ಪಂಗಡಗಳು ಮನೆಗಳ ಬಳಿ ಸುಳಿದಾಡುವುದನ್ನು ಗಮನಿಸಬಹುದು. ಇಂತಹ ಜನರಲ್ಲಿ

ಕಂಡುಬರಬಹುದಾದ ಕಪಟಗಳ ಬಗ್ಗೆಯೂ ಎಚ್ಚರ ಆವಶ್ಯಕ.

ಭವಿಷ್ಯ ನುಡಿಯುವವರ ಮಾತಿಗೆ ಮರುಳಾಗಿ ಅನೇಕ ಮಹಿಳೆಯರು ಅವರನ್ನು ಮನೆಯ ಒಳಗಡೆ ಕರೆದು, ಸೂಕ್ತ ಸಂಭಾವನೆಯನ್ನು ಕೊಟ್ಟು ಅವರ ಅಮರವಾಣಿಗೆ ಕಿವಿ ಕೊಡುವವರೂ ಕಂಡುಬರುತ್ತಾರೆ. ಮನೆಗೆ ಶುಭವಾಗುತ್ತದೆ, ಮನೆಯವರಿಗೆ ಒಳ್ಳೆಯದಾಗುತ್ತದೆ ಎಂದೆಲ್ಲ ಹೇಳಿ, ಮನೆಯವರನ್ನು ಉಬ್ಬಿಸಿ, ತಮ್ಮ ಸಂಭಾವನೆಯನ್ನು ಗಿಟ್ಟಿಸಿಕೊಳ್ಳುತ್ತಾರೆ. ಇನ್ನೂ ಒಳ್ಳೆಯದಾಗಲೆಂದು ಪೂಜೆ ಮಾಡುವುದಾಗಿ ಹಣ, ಪಾತ್ರೆಗಳನ್ನು ಪಡೆಯುತ್ತಾರೆ. ಅಕ್ಕಿ ಮುಂತಾದ ಪೂಜಾ ಸಾಮಗ್ರಿಗಳನ್ನು ತರುವಂತೆ ಹೇಳಿ, ಮಹಿಳೆ ಆ ಕಾರ್ಯದಲ್ಲಿ ತೊಡಗಿರುವಾಗ ಕಳ್ಳತನ ಮಾಡುವ ಸಾಧ್ಯತೆಯೂ ಇದೆ.

ಇನ್ನು ಕೆಲವು ಸಂದರ್ಭಗಳಲ್ಲಿ, ಮನೆಗೆ ಕೆಡುಕು ಕಾದಿದೆ, ಮನೆಯವರಿಗೆ ಕಂಟಕವಿದೆ ಇತ್ಯಾದಿ ಅಶುಭ ವಾರ್ತೆಯನ್ನು ಹೇಳಿ, ಭಯವನ್ನು ಬಿತ್ತಿ, ನಂತರ ತಮ್ಮ ಗುಪ್ತ ಉದ್ದೇಶದಲ್ಲಿ ತೊಡಗುತ್ತಾರೆ. ಅಂದರೆ, ಪರಿಹಾರಾರ್ಥವಾಗಿ ತಾಯಿತವನ್ನು ಕಟ್ಟಬೇಕು ಅಥವಾ ನಿಂಬೆಹಣ್ಣನ್ನು ಮಂತ್ರಿಸಿ ಕೊಡುತ್ತೇನೆ ಇತ್ಯಾದಿ ಹೇಳಿ ಅದಕ್ಕೆ ಹಣ, ಪಾತ್ರೆ ಪದಾರ್ಥಗಳನ್ನು ಕೊಡುವಂತೆ ಆಜ್ಞೆ ಮಾಡುತ್ತಾರೆ. ಇನ್ನು ಹಲವು ಬಾರಿ, ಮನೆಯವರನ್ನು ಹೆದರಿಕೆಗೆ ಒಳಗಾಗಿಸಿ, ಅವರನ್ನು ಯಾವುದೋ ಮಂತ್ರಕ್ಕೆ ಒಳಗಾದವರಂತೆ ಮಾಡಿ, ಸಾಕಷ್ಟು ಸಂಪಾದನೆ ಮಾಡಿಕೊಂಡು ಹೋಗಬಹುದು. ಇಂತಹ ಸಂದರ್ಭಗಳಲ್ಲಿ ಕಳ್ಳತನಗಳನ್ನು ಮಾಡಬಹುದು.

ಅನುಮಾನಾಸ್ಪದ ರೀತಿಯ ಹಾಗೂ ಅವರ ಬಗ್ಗೆ ಏನೂ ಗೊತ್ತಿಲ್ಲದ, ಮೇಲೆ ವಿವರಿಸಿದಂತಹ ಜನರನ್ನು ಮನೆಯ ಒಳಗೆ ಸೇರಿಸಿಕೊಳ್ಳುವುದು ಸರಿಯೆ ? ಅದರಲ್ಲಿಯೂ ಮನೆಯಲ್ಲಿ ಮಹಿಳೆ ಮಾತ್ರ ಇದ್ದಾಗ, ಇಂತಹ ಜನರನ್ನು ಒಳಗಡೆ ಸೇರಿಸುವುದು ಸರಿಯೆ ? ಮನೆಯೊಳಗೆ ಪ್ರವೇಶ ಪಡೆವ ವ್ಯಕ್ತಿ ಅಲ್ಲಿನ ವಾತಾವರಣವನ್ನು ಗಮನಿಸಿ, ಮನೆಯಾಕೆಯನ್ನು ಹೆದರಿಸಿ, ಕಳ್ಳತನ ಮತ್ತು ಮಾನಾಪಹರಣ ಕಾರ್ಯ

ದಲ್ಲಿಯೂ ತೊಡಗುವ ಸಾಧ್ಯತೆ ಇಲ್ಲವೆ ? ಈ ಪ್ರಶ್ನೆಗಳಿಗೆ ತನ್ನ ಮನೆಯ ಪರಿಸ್ಥಿತಿಗನುಗುಣವಾಗಿ ಪ್ರತಿ ಮಹಿಳೆಯೂ ಉತ್ತರವನ್ನು ಕಂಡುಕೊಳ್ಳ ಬೇಕು.

ಒಟ್ಟಿನಲ್ಲಿ ಒಂಟಿಯಾಗಿರುವ ಮನೆಯಾಕೆ ಇಂತಹ ಸಾಧ್ಯತೆಗಳ ಬಗೆಗೆ ಎಚ್ಚರ ವಹಿಸಬೇಕು. ಅನುಮಾನ ಬರುವಂತಹ ವ್ಯಕ್ತಿಗಳೊಡನೆ ವ್ಯವಹಾರ ಸಲ್ಲದು, ಅಂತಹವರನ್ನು ಮನೆಯೊಳಗೆ ಸೇರಿಸಿಕೊಂಡು ನಿಸ್ಸಹಾಯಕಳಂತೆ ವರ್ತಿಸುವ ಬದಲು, ಅನಿವಾರ್ಯವೆನಿಸಿದಾಗ ಮನೆಯ ಹೊರಗಡೆಯೇ ವಿಚಾರಿಸಿ ಕಳುಹಿಸುವುದು ಒಳ್ಳೆಯದು.

**ಮೂರು :** ರಾತ್ರಿಯ ಹೊತ್ತು ಎರಡನೆಯ ಷೋ ಸಿನಿಮಾ ಅಥವಾ ನಾಟಕಕ್ಕೆ ಹೋಗುವ ಅಭ್ಯಾಸದ ಬಗೆಗೆ ಒಂದು ಮಾತು. ಸಾಮಾನ್ಯ ವಾಗಿ ರಾತ್ರಿಯ ಎರಡನೆಯ ಷೋ ಮುಕ್ತಾಯವಾಗುವ ವೇಳೆಗೆ ಮಧ್ಯ ರಾತ್ರಿ 12½ ಅಥವಾ 1 ಘಂಟೆಯಾಗಿರುತ್ತದೆ. ಬಹಳ ಅಪರೂಪಕ್ಕೆ ಹೋಗುವ, ಹಲವಾರು ಜನ ಗುಂಪಿನಲ್ಲಿ ಹೋಗುವ ಅಥವಾ ಹೋಗಿ ಬರಲು ವಾಹನ ಸೌಕರ್ಯಗಳಿರುವ ಸಂದರ್ಭಗಳಲ್ಲಿ, ಈ ಹೊತ್ತಿನ ಸಿನಿ ಮಾಕ್ಕೆ ಹೋಗುವುದೂ ಅಷ್ಟೊಂದು ಆಕ್ಷೇಪಾರ್ಹವೆನಿಸುವುದಿಲ್ಲ. ಆದರೆ ಈ ಹೊತ್ತಿನ ಷೋಗೆ ಹೋಗುವುದನ್ನೇ ಅಭ್ಯಾಸ ಮಾಡಿಕೊಳ್ಳುವುದು ಮತ್ತು ಪತಿ ಪತ್ನಿ ಇಬ್ಬರೇ ದೂರದ ಚಿತ್ರಮಂದಿರಗಳಿಗೆ ಹೋಗಿ ಬರುವುದು, ಅದರಲ್ಲಿಯೂ ವಾಹನ ಸೌಲಭ್ಯಗಳಿಲ್ಲದೆ ನಡೆದು ಬರುವುದು ಎಷ್ಟು ಸುರಕ್ಷಿತ ಎನ್ನುವುದನ್ನು ಯೋಚಿಸಬೇಕು.

ರಾತ್ರಿಯ ಈ ವೇಳೆಯಲ್ಲಿ ದಂಪತಿಗಳಿಬ್ಬರೇ ಚಿತ್ರಮಂದಿಗಗಳಿಗೆ ಹೋಗಿ ಬರುವ ಅಭ್ಯಾಸ ಎಲ್ಲ ಕಾಲಕ್ಕೂ ಸುರಕ್ಷಿತವೆಂದು ಹೇಳಲಾಗದು. ಇಂತಹ ಅವಕಾಶಗಳಿಗಾಗಿಯೆ ಕಾಯುತ್ತಿರುವ ಸಮಾಜ ಘಾತುಕ ವ್ಯಕ್ತಿ ಗಳಿಗೂ ಕೊರತೆಯಿಲ್ಲ. ಅಂತೆಯೆ ಹಲವೆಡೆ ಅಹಿತಕರ ಘಟನೆಗಳು ನಡೆದಿವೆ. ಯಾವುದೇ ವ್ಯಕ್ತಿ ಎಷ್ಟೇ ಧೈರ್ಯವಂತ ಹಾಗೂ ಶಕ್ತಿವಂತ ನಾಗಿದ್ದರೂ ಸಹ, ದುಷ್ಟ ಚಟುವಟಿಕೆಗಳಲ್ಲಿ ಪಳಗಿದಂತಹ, ಅದಕ್ಕೆ ಸದಾ

ಸಿದ್ಧರಾಗಿಯೇ ಇರುವ ಹಲವು ಜನರು ಒಟ್ಟಿಗೆ ಎದುರಾದಾಗ, ಅವರನ್ನು ಎದುರಿಸುವುದು ಕಷ್ಟದ ಕೆಲಸ. ಅಂದ ಮೇಲೆ ಅಪಾಯದ ಪರಿಸ್ಥಿತಿಯನ್ನು ಊಹಿಸಿಯೂ ಅದನ್ನು ಮೈಮೇಲೆ ಎಳೆದುಕೊಳ್ಳುವುದು ಸೂಕ್ತವೆ? ಬಹುಶಃ ಯಾವುದೇ ಆಕಸ್ಮಿಕಗಳಿಗೆ ಅವಕಾಶ ಕೊಡದಂತೆ ವರ್ತಿಸುವುದು ಹಾಗೂ ಮುನ್ನೆಚ್ಚರಿಕೆ ಸೂಕ್ತವೆನಿಸುತ್ತದೆ.

**ನಾಲ್ಕು :** ಗೃಹಿಣಿಯರು ಮನೆಯ ಮುಂದೆ ಹಲವಾರು ವಸ್ತುಗಳನ್ನು ಖರೀದಿಸುವುದು ಸ್ವಾಭಾವಿಕ. ಇದರಿಂದಾಗಿ ನಾನಾ ವ್ಯಾಪಾರಗಾರರೂ ಮನೆಗಳ ಬಳಿ ಸುಳಿದಾಡುತ್ತಾರೆ. ಸ್ಟೇನ್‌ಲೆಸ್ ಸ್ಟೀಲ್ ಪಾತ್ರೆಗಳು, ಪಿಂಗಾಣಿ ಸಾಮಗ್ರಿಗಳು, ಪ್ಲಾಸ್ಟಿಕ್ ಸಾಮಗ್ರಿಗಳು, ಸೀರೆಗಳು, ಹಳೆಯ ಪೇಪರ್ ಖರೀದಿ, ಅಲಂಕಾರ ಸಾಮಗ್ರಿಗಳು, ಹೀಗೆ ನಾನಾ ರೀತಿಯ ವಸ್ತುಗಳ ಮಾರಾಟಗಾರರು ವ್ಯಾಪಾರಕ್ಕಾಗಿ ಮನೆಗಳಿಗೆ ಬರುವುದು ಸಾಮಾನ್ಯ ದೃಶ್ಯ.

ಇಂತಹ ವ್ಯಾಪಾರಗಳ ಸಂದರ್ಭದಲ್ಲಿ ಮಹಿಳೆಯರು ಹಲವು ರೀತಿಯ ವ್ಯಾಪಾರಿಗಳನ್ನು ಮನೆಯ ಮುಂಬಾಗಿಲಿನ ಹೊರಗಡೆಯೆ ನಿಲ್ಲಿಸಿ ವ್ಯಾಪಾರ ಮಾಡಿದರೆ, ಇನ್ನು ಕೆಲವು ರೀತಿಯ ವ್ಯಾಪಾರಿಗಳನ್ನು ಮನೆಯ ವರಾಂಡ ಮತ್ತು ಹಾಲ್‌ಗಳಿಗೆ ಬರಮಾಡಿಕೊಂಡು ವ್ಯಾಪಾರ ಮಾಡುವುದೂ ಸಾಮಾನ್ಯ ಸಂಗತಿ. ಪ್ರಮುಖವಾಗಿ ಇವರೆಲ್ಲ ವ್ಯಾಪಾರಗಾರರೇ ಹೌದು. ಇದೊಂದು ದುಡಿಮೆಯ ಮಾರ್ಗ. ಆದರೆ ಇವರುಗಳ ನಡುವೆ ಸಮಯ ಸಾಧಕರು ಮತ್ತು ವಂಚಕರು ನುಸುಳಿರಬಹುದಾದ ಸಾಧ್ಯತೆಯನ್ನು ತಳ್ಳಿ ಹಾಕುವಂತಿಲ್ಲ. ವಾಸ್ತವವಾಗಿ ವ್ಯಾಪಾರಗಾರರೂ ಹಲವು ಸನ್ನಿವೇಶಗಳಲ್ಲಿ ಪ್ರಚೋದನೆಗೊಂಡು ದುಷ್ಕಾರ್ಯಗಳಲ್ಲಿ ತೊಡಗಬಹುದು.

ಅಕ್ಕಪಕ್ಕ ಕಡಿಮೆ ಮನೆಗಳಿರುವ ಒಂಟೊಂಟಿ ಮನೆಗಳ ಗೃಹಿಣಿಯರು, ಚಿಕ್ಕ ಕುಟುಂಬಗಳವರು, ಮನೆಯಲ್ಲಿ ಒಬ್ಬೊಬ್ಬರೇ ಇರುವ ಸಂದರ್ಭಗಳಲ್ಲಿ ವಿಶೇಷ ಎಚ್ಚರಿಕೆ ವಹಿಸುವುದು ಆವಶ್ಯಕ. ಮೇಲಿನ

ಸಂದರ್ಭಗಳು ಕೆಟ್ಟ ಮನಸ್ಸಿನ ವ್ಯಾಪಾರಿಗಳಿಗೆ ಒಳ್ಳೆಯ ಅವಕಾಶ ವೆನಿಸುತ್ತದೆ. ಮನೆಯ ಒಳಗಡೆ ವ್ಯಾಪಾರಕ್ಕೆ ಬಂದ ವ್ಯಕ್ತಿ, ಮನೆಯಲ್ಲಿನ ಒಬ್ಬೊಂಟಿತನ, ಕಳ್ಳತನಕ್ಕೆ ಆಕರ್ಷಕವಾಗಿ ಕಂಡುಬರುವ ಮನೆಯ ಸಾಮಗ್ರಿಗಳು ಮತ್ತು ಮನೆಯ ನೆರೆಹೊರೆಯ ಪರಿಸ್ಥಿತಿ ಇವೆಲ್ಲವುಗಳಿಂದ ಪ್ರಚೋದನೆಗೊಂಡು ಮೋಸ ಪ್ರಕರಣದಲ್ಲಿ ತೊಡಗಬಹುದು.

ಆದ್ದರಿಂದ ಮನೆಯಲ್ಲಿ ಒಬ್ಬೊಬ್ಬರೆ ಇರುವ ವೇಳೆಯಲ್ಲಿ ವ್ಯಾಪಾರಕ್ಕೆ ಬಂದವರನ್ನು ಮನೆಯೊಳಗಡೆ ಕರೆದು ವ್ಯಾಪಾರ ಮಾಡುವ ಆವಶ್ಯಕತೆಯ ಬಗೆಗೆ ಯೋಚಿಸಬೇಕು. ಇದು ಅನಿವಾರ್ಯವೆನಿಸಿದ ಸಂದರ್ಭದಲ್ಲಿ ಯಾವುದೇ ಪರಿಸ್ಥಿತಿಯನ್ನು ಎದುರಿಸಬಲ್ಲಂತಹ ಮಾನಸಿಕ ಸ್ಥೈರ್ಯವನ್ನು ಹೊಂದಿರಬೇಕು. ಪರಿಸ್ಥಿತಿಗೆ ಅನುಗುಣವಾಗಿ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿರಬೇಕು. ಸಾಧ್ಯವಾದ ಮಟ್ಟಿಗೆ ವರಾಂಡಗಳಲ್ಲಿಯೆ ವ್ಯಾಪಾರವನ್ನು ಮುಗಿಸುವ ಹಾಗೂ ಮುಂದಿನ ಬಾಗಿಲುಗಳನ್ನು ಅಂತಹ ವೇಳೆಯಲ್ಲಿ ಪೂರ್ಣವಾಗಿ ತೆಗೆದಿಟ್ಟಿರುವ ಅಭ್ಯಾಸ ಒಳ್ಳೆಯದು. ಗಾಬರಿ ಹೊಂದಿದ ಸಂದರ್ಭಗಳಲ್ಲಿ ಮನೆಯ ಒಳಭಾಗಕ್ಕೆ ಹೋಗಿ ರಕ್ಷಣೆ ಪಡೆಯುವ ಪ್ರಯತ್ನಕ್ಕಿಂತ, ಧೈರ್ಯಗೆಡದೆ ಮನೆಯ ಹೊರಗೆ ಬರುವುದು ಒಳ್ಳೆಯದು.

**ಐದು :** ನಗರಗಳಲ್ಲಿ ಗಲಭೆಗಳ ಪ್ರಕರಣಗಳೂ ಸಾಕಷ್ಟು ಕಂಡುಬರುತ್ತವೆ. ಚಳುವಳಿಗಳು, ಮೆರವಣಿಗೆಗಳು, ಪ್ರತಿಭಟನಾ ಪ್ರದರ್ಶನಗಳು, ಹೀಗೆ ಒಂದಲ್ಲ ಒಂದು ಚಟುವಟಿಕೆ ನಡೆದಿರುತ್ತವೆ. ನಗರಗಳ ಬಂದ್ ಆಚರಣೆಗೆ ಕರೆ ಕೊಡುವ ಸಂಘ ಸಂಸ್ಥೆಗಳೂ ಹಲವಾರು. ವಿದ್ಯಾರ್ಥಿಗಳು ತಮ್ಮ ಕೆಲವು ಬೇಡಿಕೆಗಳಿಗೋಸ್ಕರ, ಚಳುವಳಿಗಾರರು ಹಾಗೂ ಕಾರ್ಮಿಕ ವರ್ಗ ತಮ್ಮ ಹಲವು ಸಮಸ್ಯೆಗಳ ಪರಿಹಾರಕ್ಕೋಸ್ಕರ ಅಥವಾ ರಾಜಕೀಯ ಪಕ್ಷಗಳು ನಾನಾ ಕಾರಣಗಳಿಗೋಸ್ಕರ ಚಳುವಳಿಗಳನ್ನು ನಡೆಸುವುದು ಹಾಗೂ 'ನಗರ ಬಂದ್'ಗೆ ಕರೆ ಕೊಡುತ್ತಿರುತ್ತವೆ. ಅಹಿಂಸಾತ್ಮಕವೆಂದು ಪ್ರಾರಂಭವಾಗುವ ಚಳುವಳಿಗಳು ಸಾಮಾನ್ಯವಾಗಿ

ಹಿಂಸಾ ರೂಪವನ್ನು ತಾಳುತ್ತವೆ. ಜನಜೀವನ ಅಸ್ತವ್ಯಸ್ತಗೊಳ್ಳುತ್ತವೆ. ನತದೃಷ್ಟರಾರಿಗೋ ಕೆಲವರಿಗೆ ಪೆಟ್ಟು ಬೀಳತ್ತದೆ. ಸಾರ್ವಜನಿಕ ಆಸ್ತಿಗೆ ಸ್ವಲ್ಪ ನಷ್ಟ ಉಂಟಾಗುತ್ತದೆ.

ದೊಂಬಿ ಗಲಭೆಗಳಲ್ಲಿ ಯಾರಿಗೆ ಹೊಡೆತ ಬೀಳುತ್ತದೆ ಎಂದು ಹೇಳಲು ಆಗುವುದಿಲ್ಲ. ನಗರದ ಯಾವುದೋ ಒಂದು ಭಾಗದಲ್ಲಿ ಗಲಭೆಯಿಂದಾಗಿ ಸಿಲುಕಿಕೊಂಡವರು ಮನೆಗೆ ಹಿಂದಿರುಗುವುದು ಬಹಳ ಕಷ್ಟದ ಕೆಲಸವೇ ಆಗುತ್ತದೆ. ಸಾಮಾನ್ಯವಾಗಿ ಗಲಭೆಗಳಿಗೆ ಮುನ್ಸೂಚನೆ ಗೊತ್ತಾಗುತ್ತದೆ. ಇದರಿಂದಾಗಿ ಅಂತಹ ದಿನಗಳಲ್ಲಿ ಹೆಂಗಸರು, ಮಕ್ಕಳನ್ನು ಹೊರಗಡೆ ಕಳುಹಿಸದೇ ಇರುವುದು ಕ್ಷೇಮ. ಅತ್ಯಂತ ಅನಿವಾರ್ಯದ ಕೆಲಸವಿದ್ದ ಸಂದರ್ಭದಲ್ಲಿ, ಪರಿಸ್ಥಿತಿಯನ್ನು ನೋಡಿಕೊಂಡು ಹೊರಗಡೆ ಹೊರಡಬಹುದೇ ಹೊರತು ಸಾಮಾನ್ಯವಾಗಿ ಗಲಭೆಯ ಸಂದರ್ಭಗಳು ಕ್ಷೇಮವಲ್ಲ. ಆ ದಿನಗಳ ಕಾರ್ಯಕ್ರಮಗಳನ್ನು ಮುಂದೂಡಬಹುದು. ಒಟ್ಟಿನಲ್ಲಿ ಪರಿಸ್ಥಿತಿಗನುಗುಣವಾಗಿ, ಪ್ರಮುಖವಾಗಿ ಮಹಿಳೆಯರು ಮತ್ತು ಮಕ್ಕಳು ಗಲಭೆಯ ದಿನಗಳಲ್ಲಿ ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳುವಂತೆ ತಿಳಿಯಹೇಳಬೇಕು.

**ಆರು :** ಅತಿಯಾದ ಜನಸಂದಣಿಯಿಂದಾಗಿ ನೂಕುನುಗ್ಗಲು, ಜೇಬುಗಳ್ಳತನ, ಮತ್ತಿತರ ಸಣ್ಣ ಪ್ರಮಾಣದಲ್ಲಿ ಸಂಭವಿಸುವಂತಹ ಸನ್ನಿವೇಶಗಳೆಂದರೆ, ಜಾತ್ರೆ, ವಸ್ತು ಪ್ರದರ್ಶನ, ಆಯಾ ಊರಿನ ವಿಶೇಷ ಉತ್ಸವ ಸಮಾರಂಭಗಳು ಹಾಗೂ ಹಲವು ಚಲನ ಚಿತ್ರಗಳು ಬಿಡುಗಡೆಯಾದ ಮೊದಲ ಕೆಲವು ದಿನಗಳು. ಚಿತ್ರ ಅಥವಾ ಸಮಾರಂಭ ಪ್ರಾರಂಭವಾದ ಮೊದಲ ದಿನವೇ, ಎಲ್ಲರಿಗೂ ಮುಂಚೆ ನೋಡಿಬಿಡಬೇಕೆಂಬ ತವಕ ಹಲವರಲ್ಲಿ. ಇದರ ಫಲ, ಮನೆಯ ಕೆಲಸಗಳನ್ನು ಬದಿಗಿರಿಸಿ, ಮಳೆ ಬಿಸಿಲೆನ್ನದೆ ಗಂಟೆಗಟ್ಟಳೆ ಕ್ಯೂ ನಿಂತು ಟಿಕೆಟ್ ಪಡೆಯುವುದು. ಟಿಕೆಟ್ ಪಡೆಯುವಾಗ ಹಲವು ಸಂದರ್ಭಗಳಲ್ಲಿ ಹೊಡೆದಾಟ ಮತ್ತು ಅಲ್ಲಿನ ಪರಿಸ್ಥಿತಿಯನ್ನು ನೋಡಿದರೆ, ಮೊದಲ ದಿನವೇ ನೋಡಬೇಕೆಂಬ ಹುಚ್ಚು ಪೈಪೋಟಿ ಸರಿಯೇ ಎನಿಸುತ್ತದೆ.

ದಂಪತಿಗಳು ಹೆಂಗಸರು ಮತ್ತು ಮಕ್ಕಳು ಇಂತಹ ಸಂದರ್ಭಗಳಲ್ಲಿ ಹೆಚ್ಚು ತೊಂದರೆಯನ್ನು ಅನುಭವಿಸಬೇಕಾಗುತ್ತದೆ. ಅಂತೆಯೇ, ಜನ ಸಂದಣಿ ಕಡಿಮೆಯಾದ ಮೇಲೆ ನಿಧಾನವಾಗಿ ನೋಡುವ ಪ್ರವೃತ್ತಿ ಯಾವುದೇ ಸಮಸ್ಯೆಗಳಿಲ್ಲದೆ ಸಮಾಧಾನಕರವೆನಿಸುತ್ತದೆ.

## ಸೂಕ್ತ ತಿಳಿವಳಿಕೆ

ಮೇಲೆ ವಿವರಿಸಿದ ಕೆಲವು ಪ್ರಕರಣಗಳು ಮತ್ತು ಇತರ ರೀತಿಯ ಪ್ರಕರಣಗಳ ಬಗೆಗೆ ತನ್ನ ಪತ್ನಿಗೆ ಸೂಕ್ತ ತಿಳಿವಳಿಕೆಯನ್ನು ಕೊಡುವುದು ಆವಶ್ಯಕ. ವಿವೇಚನೆಯನ್ನು ಕಳೆದುಕೊಳ್ಳದ, ಆಧೈರ್ಯವನ್ನು ತಾಳದ ಅಥವಾ ತೋರ್ಪಡಿಸಿಕೊಳ್ಳದ. ಬುದ್ಧಿವಂತಿಕೆಯ ವರ್ತನೆಯಿಂದ ಯಾವುದೇ ಪರಿಸ್ಥಿತಿಯನ್ನು ಎದುರಿಸಬಹುದು.

ಹೆಚ್ಚು ಶಿಕ್ಷಿತಳಲ್ಲದ ಹಾಗೂ ಮನೆಯ ಹೊರಗಿನ ವ್ಯವಹಾರದ ಬಗೆಗೆ ಹೆಚ್ಚು ತಿಳಿವಳಿಕೆಯಿಲ್ಲದ ಮತ್ತು ನಗರದ ಮೋಸ ಪ್ರಕರಣ ಗಳಿಗೆ ಸುಲಭವಾಗಿ ಬಲಿಯಾಗಬಹುದಾದಂತಹ ಮುಗ್ಧ ಮಡದಿಯನ್ನು ಪಡೆದಂತಹ ಪತಿ, ಮೋಸ ಪ್ರಕರಣಗಳ ಬಗೆಗೆ ಪತ್ನಿಗೆ ಸಾಕಷ್ಟು ತಿಳಿವಳಿ ಕೆಯನ್ನು ಕೊಡಬೇಕು. ಧೈರ್ಯವನ್ನು ತುಂಬಬೇಕು ; ಜಾಣ್ಮೆಯಿಂದ ಹೇಗೆ ವರ್ತಿಸಬಹುದು ಎಂಬುದರ ಬಗೆಗೆ ತಿಳಿಸಬೇಕು.

ಇಷ್ಟೆ ಅಲ್ಲ ಇಂತಹ ಪ್ರಕರಣಗಳು ಸಾಧ್ಯವಾದ ಮಟ್ಟಿಗೆ ಸಂಭವಿಸದಂತೆ ಮುನ್ನೆಚ್ಚರಿಕೆಯ ಕ್ರಮಗಳನ್ನು ಕೈಗೊಳ್ಳುವುದರಲ್ಲಿ ಪತಿಯ ಹೊಣೆಗಾರಿಕೆಯಿದೆ.

# ಜೀವವಿಮೆ ಮತ್ತು ರಕ್ಷಣೆ

ಮದುವೆಗೆ ಮುಂಚೆ ಒಬ್ಬ ವ್ಯಕ್ತಿ ಬಹಳ ದೃಷ್ಟಿಯಿಂದ ಸ್ವತಂತ್ರ ನೆನಿಸುತ್ತಾನೆ. ಅದೊಂದು ಒಂಟಿ ಜೀವನ. ಆತನನ್ನು ಅವಲಂಬಿಸಿರು ವವರಿಗೂ ಹೆಚ್ಚಿನದಾಗಿ, ಆತನೇ ಒಬ್ಬ ಪರಾವಲಂಬಿ. ಅಂದಮಾತ್ರಕ್ಕೆ ಆತನನ್ನು ಆಶ್ರಯಿಸಿದಂತಹವರು ಇಲ್ಲವೆಂದು ಅರ್ಥವಲ್ಲ. ವಯಸ್ಸಾದ ತಂದೆ ತಾಯಿ ಮತ್ತಿತರು, ಅವಿವಾಹಿತ ವ್ಯಕ್ತಿಯು ಆಶ್ರಯದಲ್ಲಿ ಇರುವಂ ತಹ ಪರಿಸ್ಥಿತಿ ಅಷ್ಟೇ ಸ್ವಾಭಾವಿಕ.

ಆದರೆ ಒಬ್ಬ ವ್ಯಕ್ತಿ ವಿವಾಹವಾದ ನಂತರ ಆತನ ಜವಾಬ್ದಾರಿ ಬಹಳಷ್ಟು ಹೆಚ್ಚುತ್ತದೆ. ಆತನನ್ನೇ ಪೂರ್ಣ ಆಶ್ರಯಿಸಿದಂತಹ ಪತ್ನಿ ಹಾಗೂ ಹಲವು ವರ್ಷಗಳ ನಂತರ ಮಕ್ಕಳು ಆತನ ಜೀವದ ಬೆಲೆಯನ್ನು ಹೆಚ್ಚಿಸುತ್ತಾರೆ. ವಿವಾಹಕ್ಕೆ ಮುಂಚೆ ಅಂತಹ ವ್ಯಕ್ತಿ ತನ್ನ ತಂದೆ ತಾಯಿ ಗಳಿಗೆ ಇಳಿ ವಯಸ್ಸಿನಲ್ಲಿ ಒಂದು ಆಸರೆ ಹಾಗೂ ಹಲವು ಸಂದರ್ಭಗಳಲ್ಲಿ ಆರ್ಥಿಕ ಆಧಾರವೆನಿಸಿದ್ದರೆ, ವಿವಾಹಿತನಾದ ಮೇಲೆ ಇವರುಗಳ ಜೊತೆ ಯಲ್ಲಿ, ಮಕ್ಕಳು ಮತ್ತು ಪತ್ನಿಯ ಮಟ್ಟಿಗೆ, ಆರ್ಥಿಕ ಆಧಾರ ಮಾತ್ರವೇ ಅಲ್ಲ, ಅವರ ಭವಿಷ್ಯದ ಊರುಗೋಲೇ ಆಗಿರುತ್ತಾನೆ.

ವಿವಾಹಿತ ವ್ಯಕ್ತಿಯು ಸಾವು, ಇಳಿ ವಯಸ್ಸಿನ ಹಲವು ತಂದೆ ತಾಯಿಗಳ ಮಟ್ಟಿಗೆ ಆರ್ಥಿಕ ಆಸರೆ ಮುರಿದು ಹೋದಂತೆನಿಸಿದರೆ, ಆತನ ಪತ್ನಿಯ ಮಟ್ಟಿಗೆ, ಅವಳ ಭವಿಷ್ಯ ಜೀವನವೇ ಅಸ್ಪಷ್ಟವೆನಿಸಬಹುದು. ಆಕೆ ಮತ್ತು ಮಕ್ಕಳು, ಕಷ್ಟಗಳ ಪರಂಪರೆಯನ್ನೇ ಎದುರಿಸಬೇಕಾಗಬ ಹುದು. ಆದ್ದರಿಂದಲೆ ವಿವಾಹಿತ ವ್ಯಕ್ತಿಯ ಹೊಣೆ ಹೆಚ್ಚು; ಪತಿಯೆನಿಸಿ ಕೊಂಡ ವ್ಯಕ್ತಿಯ ಜೀವದ ಬೆಲೆ ಮತ್ತು ಮಹತ್ವ ಹೆಚ್ಚು.

ಯಾರಿಗೂ ಅಕಾಲ ಮೃತ್ಯು ಬರುವುದು ಬೇಡವೆಂದು ನಾವು ಆಶಿಸೋಣ. ಆದರೆ ಆಕಸ್ಮಿಕ ಘಟನೆಗಳು ಪೂರ್ಣವಾಗಿ ನಮ್ಮ ಹತೋ

ಟಿಯಲ್ಲಿಲ್ಲ ಅಲ್ಲವೇ ?

## ಅಕಾಲ ಮೃತ್ಯು

ಸಾವು ಯಾವಾಗ, ಯಾವ ರೂಪದಲ್ಲಿ ಸಂಭವಿಸಬಹುದು ಎನ್ನು ವುದನ್ನು ಯಾರೂ ನಿರ್ಧರಿಸಲಾಗುವುದಿಲ್ಲ. ರೈಲು, ಬಸ್ಸು ಇತ್ಯಾದಿ ವಾಹನಗಳಲ್ಲಿ ಪ್ರಯಾಣ ಮಾಡುವಾಗ, ಕಾರು, ಸ್ಕೂಟರ್, ಸೈಕಲನ್ನು ನಡೆಸುವಾಗ ಅಥವಾ ರಸ್ತೆಯ ಬದಿಯಲ್ಲಿ ಸುಮ್ಮನೆ ಹೋಗುತ್ತಿರುವಾಗ, ಆಕಸ್ಮಿಕಗಳು ಸಂಭವಿಸಿ ಸಾವು ಉಂಟಾಗಬಹುದು. ಹಲವು ಸಂದರ್ಭ ಗಳಲ್ಲಿ ಸಾವಿಗೀಡಾಗುವ ವ್ಯಕ್ತಿಯ ಬೇಜವಾಬ್ದಾರಿತನ ಆಕಸ್ಮಿಕಗಳಿಗೆ ಕಾರಣವೆನಿಸಿದರೆ, ಇನ್ನು ಹಲವು ಸಂದರ್ಭಗಳಲ್ಲಿ ತಮ್ಮ ತಪ್ಪು ಏನೂ ಇಲ್ಲದೆ ಅಪಘಾತಗಳಿಗೆ ತುತ್ತಾಗುವ ಸಾಧ್ಯತೆಯೂ ಇದೆ.

ಬೆಂಕಿಯ ಆಕಸ್ಮಿಕಗಳು, ವಿದ್ಯುಚ್ಛಕ್ತಿಯ ಅಚಾತುರ್ಯಗಳು, ನೀರಿನ ಅಪಮೃತ್ಯುಗಳು, ಕಟ್ಟಡಗಳ ಕುಸಿತದಿಂದ ಸಾವು, ಹೊಡೆದಾಟ ಗಳಿಂದ ಉಂಟಾಗುವ ಮರಣಗಳು, ಪ್ರಾಣಿಗಳಿಂದ ಸಾವು, ಯಂತ್ರಗಳು, ಹೀಗೆ ಸಾವಿನ ಮುಖ ವೈವಿಧ್ಯಮಯ.

ನಾನಾ ರೀತಿಯ ರೋಗಗಳಿಂದ ಉಂಟಾಗುವ ಸಾವುಗಳು ಮತ್ತೊಂದು ರೀತಿಯವು. ಹಲವು ರೋಗಗಳು, ನರಳಿಸಿ ನರಳಿಸಿ ನಿಧಾನ ವಾಗಿ ಒಬ್ಬ ವ್ಯಕ್ತಿಯನ್ನು ಸಾವಿನ ದವಡೆಗೆ ನೂಕಿದರೆ, ಇನ್ನು ಕೆಲವು ರೋಗಗಳು ಇದ್ದಕ್ಕಿದ್ದಂತೆಯೆ, ಒಬ್ಬ ವ್ಯಕ್ತಿಯ ಆಯಸ್ಸನ್ನು ಮೊಟಕು ಗೊಳಿಸಬಲ್ಲವು. ಕ್ಯಾನ್ಸರ್, ಹೃದಯ ರೋಗ ಇತ್ಯಾದಿ ರೋಗಗಳು ಕಾಣಿಸಿಕೊಂಡ ಅತ್ಯಲ್ಪ ಕಾಲದಲ್ಲೆ ರೋಗಿಯನ್ನು ಮುಗಿಸಬಲ್ಲವು.

ಸಾವು ಸಂಭವಿಸುವ ಪ್ರಕರಣಗಳು ಒಂದು ರೀತಿಯಾದರೆ, ತೀವ್ರತರ ಅಂಗವಿಕಲತೆಯುಂಟಾಗಿ ಜೀವಮಾನ ಪೂರ್ತಿ ಮತ್ತೊಬ್ಬರನ್ನು ಅವಲಂಬಿಸಬೇಕಾದಂತಹ ಪ್ರಕರಣಗಳು ಮತ್ತೊಂದು ರೀತಿ. ಹಲವು

ರೀತಿಯ ಅಂಗವಿಕಲತೆಯಿಂದಾಗಿ ದುಡಿಯುವ, ಸಾಮರ್ಥ್ಯವನ್ನು ಕಳೆದು ಕೊಳ್ಳಬಹುದು.

## ಮುನ್ನೆಚ್ಚರಿಕೆ

ಅಪಘಾತಗಳಿಂದ ಸಂಭವಿಸುವ ಸಾವು-ನೋವುಗಳನ್ನು ತಪ್ಪಿಸು ವಲ್ಲಿ ಕೈಗೊಳ್ಳಬಹುದಾದ ಮೊದಲ ಕ್ರಮ ಮುನ್ನೆಚ್ಚರಿಕೆ. ವಾಹನ ಗಳನ್ನು ನಡೆಸುವ ಬಿಸಿರಕ್ತದ, ಹೊಸದಾಗಿ ಮದುವೆಯಾದ ಯುವಕರು ಪ್ರಮುಖವಾಗಿ, ಹಲವು ಅಂಶಗಳನ್ನು ಜ್ಞಾಪಕದಲ್ಲಿಟ್ಟುಕೊಂಡಿರಬೇಕು. ವಾಹನಗಳು ಮುಖ್ಯವಾಗಿ, ದಿನದಿತ್ಯದ ಓಡಾಟದಲ್ಲಿ ಶ್ರಮ ಮತ್ತು ಸಮಯವನ್ನು ಉಳಿಸಬಲ್ಲ ಸಾಧನಗಳೇ ಹೊರತು, ಒಬ್ಬ ವ್ಯಕ್ತಿಯ ಯಂತ್ರ ನಿಪುಣತೆ, ವಾಹನ ನಡೆಸುವ ಚಾಕಚಕ್ಯತೆ ಮತ್ತು ಸಿರಿವಂತಿಕೆಯ ಪ್ರದರ್ಶನದ ಸಾಧನಗಳಲ್ಲ. ನಗರಗಳ ಜನಸಂದಣಿಯ ರಸ್ತೆಗಳಲ್ಲಂತೂ ಎಷ್ಟು ಎಚ್ಚರವಹಿಸಿದರೂ ಸಾಲದು. ಆದರೂ ವಾಹನಗಳನ್ನು ಅತಿ ವೇಗದಲ್ಲಿ ನಡೆಸುವವರು ಮತ್ತು ನಿರ್ಲಕ್ಷ್ಯತನದಿಂದ ನಡೆಸುವವರಿಗೇನೂ ಕೊರತೆಯಿಲ್ಲ.

ಅತಿ ವೇಗದಲ್ಲಿ ವಾಹನಗಳನ್ನು ನಡೆಸುವಂತಹವರು, ಒಮ್ಮೆ ತಮ್ಮನ್ನು ನಂಬಿರುವಂತಹ ಹೆಂಡತಿ ಮತ್ತು ಮಕ್ಕಳನ್ನು ಜ್ಞಾಪಿಸಿಕೊಳ್ಳು ವುದು ಒಳ್ಳೆಯದು. ಅಂತಹ ವ್ಯಕ್ತಿಯ ಜೀವ, ವೈಯಕ್ತಿಕವಾಗಿ ಹಾಗೂ ಆಶ್ರಯಿಸಿದಂತಹವರ ದೃಷ್ಟಿಯಿಂಧ ಅತ್ಯಂತ ಅಮೂಲ್ಯ. ಅಂತೆಯೆ ತಮ್ಮ ಅಪಘಾತದಿಂದ, ಆಶ್ರಯಿಸಿದಂತಹವರಿಗೆ ಒದಗಬಹುದಾದ ಕಷ್ಟ ಪರಂಪರೆ ಯನ್ನು ಮರೆಯದೆ, ಆದಷ್ಟು ಎಚ್ಚರಿಕೆಯನ್ನು ವಹಿಸಬಹುದು.

ರಸ್ತೆಯಲ್ಲಿ ಓಡಾಡುವಾಗಲೂ ಸಹ ಎಚ್ಚರಿಕೆಯನ್ನು ವಹಿಸಬೇಕು. ನಗರಗಳಲ್ಲಿ ಪಾದಚಾರಿಗಳಿಗೋಸ್ಕರವಿರುವ ಹಾದಿಯಲ್ಲೆ ಆದಷ್ಟೂ ನಡೆಯಬೇಕು. ಇದು ಸಂಚಾರ ನಿಯಮವೂ ಹೌದು. ಆದರೆ, ಉದಾಸೀನ ಭಾವದಿಂದ ರಸ್ತೆಯ ಮಧ್ಯದಲ್ಲಿಯೇ ಓಡಾಡುವುದು ಹಲವರಲ್ಲಿ ಕಂಡು

ಬರುತ್ತದೆ. ಇದರಿಂದ ವಾಹನಗಳನ್ನು ನಡೆಸುವವರಿಗೆ ತೊಂದರೆ, ಹಾಗೂ ಅದರಿಂದ ಅಪಘಾತಗಳಾಗಬಹುದು ಎಂಬ ಪರಿವೆ ಅನೇಕರಿಗೆ ಇರುವುದಿಲ್ಲ. ವಾಹನಗಳನ್ನು ನಡೆಸುವವರು ಬೇಕಾದರೆ ಎಚ್ಚರವಹಿಸಲಿ ಎಂಬ ಧೋರಣೆ, ವಾಹನ ನಡೆಸುವವರು ಹೇಗೆ ಡಿಕ್ಕಿ ಹೊಡೆಯುತ್ತಾರೆ ನೋಡೋಣ ಎಂಬ ಉದ್ಧಟತನ ಹಲವರಲ್ಲಿ. ಹೀಗೆ ಯೋಚಿಸುವವರು ಒಂದು ಮಾತನ್ನು ಸದಾ ನೆನಪಿನಲ್ಲಿಡಬೇಕು. ಅಪಘಾತಗಳಿಗೆ ಕಾರಣರಾದವರನ್ನು ಹಿಡಿದು ಹೊಡೆಯಬಹುದು ಅಥವಾ ಶಿಕ್ಷಿಸಬಹುದು. ಆದರೆ ಉದಾಸೀನದಿಂದ ರಸ್ತೆಯ ಮಧ್ಯದಲ್ಲಿಯೆ ನಡೆಯುವ ಪಾದಚಾರಿಗೆ ಸಾವು ಅಥವಾ ನೋವು ಸಂಭವಿಸಿದಲ್ಲಿ ಅನುಭವಿಸಬೇಕಾದವರು ಯಾರು ?

## ಜೀವವಿಮೆ

ಯಾರೂ ಅಕಾಲ ಮೃತ್ಯುವಿಗೆ ತುತ್ತಾಗುವುದು ಬೇಡ. ಇದು ನಮ್ಮೆಲ್ಲರ ಹಾರೈಕೆ. ಆದರೆ ಇಂತಹ ಸಾವುಗಳನ್ನು ಪೂರ್ಣವಾಗಿ ತಪ್ಪಿಸಲು ಸಾಧ್ಯವೆ ? ಯಾರು ಎಷ್ಟೇ ಎಚ್ಚರ ವಹಿಸಿದರೂ ಸಹ, ಹಲವು ಸಂದರ್ಭಗಳಲ್ಲಿ ಅಪಘಾತಗಳು ಮತ್ತು ಆಕಸ್ಮಿಕಗಳು ಸಂಭವಿಸುತ್ತವೆ; ಅದರಿಂದ ಸಾವುಗಳು ಸಂಭವಿಸುತ್ತವೆ. ಇಂತಹ ಸಾವುಗಳನ್ನು ತಪ್ಪಿಸುವುದು ನಮ್ಮಿಂದ ಸಾಧ್ಯವಿಲ್ಲವೆಂದಾಗ, ಕನಿಷ್ಠ ಇಂತಹ ಸಾವುಗಳಿಂದ ಮೃತರನ್ನು ಆಶ್ರಯಿಸಿದ್ದ ಜನರ ಮೇಲಾಗುವ ಪರಿಣಾಮವನ್ನಾದರೂ ಸ್ವಲ್ಪ ಮಟ್ಟಿಗೆ ಕಡಿಮೆ ಮಾಡಲು ಪ್ರಯತ್ನ ಪಡಬಹುದಲ್ಲವೆ ? ಪತಿಯ ಸಾವಿನಿಂದ ಆತನ ಪತ್ನಿ ಮತ್ತು ಮಕ್ಕಳ ಮೇಲೆ ಉಂಟಾಗುವ ಮಾನಸಿಕ ಮತ್ತು ಸಾಮಾಜಿಕ ಆಘಾತವನ್ನು ನಿವಾರಿಸಲು ಸಾಧ್ಯವಿಲ್ಲ. ಆದರೆ, ಆರ್ಥಿಕ ದುಷ್ಪರಿಣಾಮವನ್ನು ಸ್ವಲ್ಪಮಟ್ಟಿಗೆ ಕಡಿಮೆಗೊಳಿಸುವ ಸಾಧ್ಯತೆ ಇದೆ. ಜೀವವಿಮೆ ಈ ದಿಸೆಯಲ್ಲಿ ಸ್ವಲ್ಪಮಟ್ಟಿನ ಪರಿಹಾರವೆನಿಸುತ್ತದೆ.

ಜೀವವಿಮೆಯ (Life Insurance) ಬಗೆಗೆ ಹಲವರಲ್ಲಿ ಭಿನ್ನ ಅಭಿಪ್ರಾಯಗಳಿರುವುದು ಕಂಡುಬರುತ್ತದೆ. 'ಜೀವವಿಮೆಯಲ್ಲಿ ಹಣವನ್ನು ತೊಡಗಿಸುವುದು ಹೆಚ್ಚು ಲಾಭದಾಯಕವಲ್ಲ. ಇದೇ ಹಣವನ್ನು ಬ್ಯಾಂಕ್

ನಲ್ಲಿ ಠೇವಣಿ ಇಟ್ಟರೆ ಕೊನೆಯಲ್ಲಿ ಬಡ್ಡಿಯೂ ಸೇರಿ ಹೆಚ್ಚು ಹಣ ಸಿಗು ತ್ತದೆ. ಸಾವಿಗೆ ಹೆದರಿ ಜೀವವಿಮೆ ಮಾಡಿಸಬೇಕಾದ ಆವಶ್ಯಕತೆಯೇನು ? ಅಲ್ಲದೆ ಸಾವು ಬಹಳ ಅಪರೂಪವಾಗಿ ಸಂಭವಿಸುತ್ತದೆ' ಇತ್ಯಾದಿ ಮಾತು ಗಳು ಜೀವವಿಮೆಗೆ ವಿರುದ್ಧವಾಗಿ ಅಲ್ಲಲ್ಲಿ ಕೇಳಿಬರುತ್ತವೆ.

ಆದರೆ ಜೀವವಿಮೆ, ಬಡ್ಡಿಯ ಆಸೆಗೋಸ್ಕರ ಕೈಗೊಳ್ಳುವಂತಹ ವ್ಯವಹಾರವಲ್ಲ. ಒಬ್ಬ ವ್ಯಕ್ತಿಯ ಆಕಸ್ಮಿಕ ಸಾವಿನಿಂದ, ಆತನನ್ನು ಆಶ್ರಯಿ ಸಿದವರು ನಿರ್ಗತಿಕರಾಗದಂತೆ ಕಾಪಾಡುವುದು ಮುಖ್ಯಉದ್ದೇಶ. ದುಡಿಯುವ ಒಬ್ಬ ವ್ಯಕ್ತಿಯ ಅಕಾಲ ಮರಣದಿಂದ ಆತನ ಹೆಂಡತಿ ನಿರ್ಗತಿಕಳಾಗಿ, ಅಸಹಾಯಕಳಾಗಿ ಇತರರ ಮುಂದೆ ಅಂಗಲಾಚುವುದನ್ನು ತಪ್ಪಿಸುವುದು, ಆತನ ಮಕ್ಕಳು ಅನಾಥರಾಗಿ ಕಷ್ಟಗಳನ್ನು ಅನುಭವಿಸುವುದನ್ನು ತಪ್ಪಿಸು ವುದು ಇದರ ಮುಖ್ಯ ಉದ್ದೇಶ. ಸಾವಿಗೆ ಹೆದರಿ ಜೀವವಿಮೆ ಮಾಡಿಸು ವುದಲ್ಲ. ಇದಕ್ಕೆ ಪ್ರತಿಯಾಗಿ, ತನ್ನ ಪ್ರೀತಿಯ ಪತ್ನಿ ಮತ್ತು ಮಕ್ಕಳು, ತನ್ನ ಆಕಸ್ಮಿಕ ಅಗಲಿಕೆಯ ನಂತರ ಬೀದಿ ಪಾಲಾಗದೆ, ವಿಮೆಯಿಂದ ಬರುವ ಹಣದಿಂದ ಸ್ವಲ್ಪ ಆಸರೆ ಪಡೆದು, ಜೀವನ ಸಾಗಿಸುವ ಚೈತನ್ಯವನ್ನು ಪಡೆ ಯಲಿ ಎಂಬ ಸದುದ್ದೇಶದಿಂದ ಜೀವವಿಮೆ ಅತ್ಯವಶ್ಯಕ.

ಅಂತೆಯೆ ಪ್ರತಿ ವಿವಾಹಿತ ವ್ಯಕ್ತಿಯೂ ಜೀವವಿಮೆಯನ್ನು ಪಡೆಯಬೇಕು. ಸಾವು ಬೇಕೆಂದು ಆಶಿಸುವುದು ಬೇಡ. ಆದರೆ, ಯಾರಿಗೆ ಯಾವಾಗ ಬೇಕಾದರೂ ಸಾವು ಸಂಭವಿಸಬಹುದು ಎಂಬುದನ್ನು ಮರೆಯಲಾಗದು. ಒಂದು ಕ್ಷಣ, ತಾನು ಸತ್ತರೆ ಏನಾಗಬಲ್ಲದು ಎನ್ನುವು ದನ್ನು ನೆನೆಸಿಕೊಂಡರೆ ಸಾಕು. ನಿರ್ಗತಿಕಳಾದ ಪತ್ನಿ ಯಾರು ಯಾರ ಮುಂದೆ ಅಂಗಲಾಚಬೇಕಾಗಬಹುದು, ಏನೆಲ್ಲ ಅಪಮಾನ, ಮೋಸ, ಕಷ್ಟ ಗಳನ್ನು ಅನುಭವಿಸಬೇಕಾಗಬಹುದು, ಮಕ್ಕಳ ಸ್ಥಿತಿ ಏನಾಗಬಹುದು ಇತ್ಯಾದಿ ಚಿತ್ರಗಳ ಕಲ್ಪನೆಯಿಂದಲೆ ಮೈ ಜುಂ ಎನ್ನುತ್ತದೆ. ಇದನ್ನು ಸ್ವಲ್ಪ ಮಟ್ಟಿಗಾದರೂ ತಪ್ಪಿಸಬಹುದಾದ ಒಂದು ವ್ಯವಸ್ಥೆಯೆ ಜೀವವಿಮೆ.

ಜೀವವಿಮೆಯಲ್ಲಿನ ವಿವಿಧ ಮಾದರಿ ಮತ್ತು ಸೌಲಭ್ಯಗಳನ್ನು

ವಿಮೆಯ ಏಜೆಂಟರಿಂದ ಮತ್ತು ಸ್ನೇಹಿತರಿಂದ ಕೇಳಿ ತಿಳಿದುಕೊಂಡು, ತನ್ನ ಸಂಪಾದನೆಯಲ್ಲಿ ಎಷ್ಟು ಹಣವನ್ನು ವಿಮೆಯ ಮೂಲಕ ಉಳಿತಾಯ ಮಾಡಬಲ್ಲೆನೆಂದು ನಿರ್ಧರಿಸಬೇಕು. ಒಟ್ಟಿನಲ್ಲಿ ಪ್ರತಿ ವಿವಾಹಿತ ವ್ಯಕ್ತಿಯೂ ತನ್ನ ಪತ್ನಿ, ಮಕ್ಕಳು ಮತ್ತು ತನ್ನನ್ನು ಆಶ್ರಯಿಸಿದ ಇತರರ ಕ್ಷೇಮಕ್ಕೋಸ್ಕರ, ತನ್ನ ಆದಾಯಕ್ಕೆ ಅನುಗುಣವಾಗಿ ಜೀವವಿಮೆಯನ್ನು ಪಡೆದಿರಬೇಕು.

## ವೈಯಕ್ತಿಕ ಅಪಘಾತ ಜನತಾವಿಮೆ

Janata Personal Accident Insurance

ಹಲವು ಅಪಘಾತಗಳಲ್ಲಿ ಒಂದು ಕೈ ಅಥವಾ ಕಾಲು ಅಥವಾ ಕಣ್ಣು, ಇನ್ನು ಕೆಲವು ಸಂದರ್ಭಗಳಲ್ಲಿ ಎರಡೂ ಕಾಲು, ಕೈ, ಕಣ್ಣುಗಳನ್ನು ಕಳೆದುಕೊಳ್ಳಬಹುದು. ಅಪಘಾತಗಳಿಂದ ಹೀಗೆ ಕೈ, ಕಾಲು ಮತ್ತು ಕಣ್ಣುಗಳನ್ನು ಕಳೆದುಕೊಳ್ಳುವ ಹಾಗೂ ಮರಣ ಸಂಭವಿಸುವ ಪ್ರಕರಣಗಳಿಗೇ ಪ್ರತ್ಯೇಕ ವಿಮಾ ವ್ಯವಸ್ಥೆಯೂ ಇದೆ. ಇದನ್ನು ಜನತಾ ಅಪಘಾತ ವಿಮೆ ಎಂದು ಕರೆಯುತ್ತಾರೆ.

ಹಲವು ಅಪಘಾತಗಳಿಂದ ಸಾವು ಸಂಭವಿಸದೇ ಇರಬಹುದು. ಆದರೆ ಕೈ, ಕಾಲು, ಕಣ್ಣುಗಳನ್ನು ಕಳೆದುಕೊಂಡ ವ್ಯಕ್ತಿಯ ದುಡಿಯುವ ಸಾಮರ್ಥ್ಯವೇ ಹೋಗಿಬಿಡಬಹುದು. ಇದರಿಂದ ಸಾಕಷ್ಟು ತೊಂದರೆಯನ್ನು ಅನುಭವಿಸಬೇಕಾಗುತ್ತದೆ.

ವರ್ಷಕ್ಕೆ ರೂ 12/- ನ್ನು ಮಾತ್ರ ಕೊಡಬೇಕಾದ ಈ ವಿಮೆಯ ಪದ್ಧತಿಯಲ್ಲಿ, ಕಟ್ಟಿದ ಹಣವನ್ನು ವಾಪಸ್ಸು ಕೊಡಲಾಗುವುದಿಲ್ಲ. 10 ರಿಂದ 65 ವರ್ಷ ವಯಸ್ಸಿನೊಳಗಿನ ಯಾರು ಬೇಕಾದರೂ ಈ ವಿಮೆಯನ್ನು ಪಡೆಯಬಹುದು. ಈ ವಿಮೆಯನ್ನು ಪಡೆಯಲು ವೈದ್ಯಕೀಯ ಪರೀಕ್ಷೆಯ ಆವಶ್ಯಕತೆಯಿಲ್ಲ; ವರಮಾನ ಇಂತಿಷ್ಟೇ ಇರಬೇಕೆಂಬ ನಿಗಧಿಯಿಲ್ಲ. ಹಾಗೂ ಈ ವಿಮಾ ಪಾಲಿಸಿಯನ್ನು ಪಡೆಯುವುದು ಅತ್ಯಂತ

ಸುಲಭ. ಮೇಲೆ ಸೂಚಿಸಿದ ವಯಸ್ಸಿನೊಳಗಿನ ಯಾರು ಬೇಕಾದರೂ ಈ ವಿಮಾ ಆಫೀಸಿನಲ್ಲಿ ರೂ. 12/- ಮತ್ತು ಕೆಲವು ವಿವರಗಳನ್ನು ಕೊಟ್ಟು ಪಾಲಿಸಿಯ ಒಪ್ಪಂದ ಪತ್ರಕ್ಕೆ ಸಹಿ ಹಾಕಿ, ಜೊತೆಯಲ್ಲಿಯೇ ಪಾಲಿಸಿಯನ್ನು ಪಡೆದು ನೆಮ್ಮದಿಯಿಂದ ಮನೆಗೆ ಹಿಂದಿರುಗಬಹುದು.

ಅಪಘಾತದಿಂದ ಮರಣ ಸಂಭವಿಸಿದಲ್ಲಿ ಪಾಲಿಸಿ ಹೊಂದಿದ್ದ ಮೃತರ ಸಮೀಪ ಸಂಬಂಧಿಗಳಿಗೆ ರೂ. 12,000/- ವನ್ನು ಕೊಡಲಾಗುತ್ತದೆ. ಅಪಘಾತಗಳೆಂದಾಗ ಬಸ್ಸು, ರೈಲು, ಕಾರು ಇತ್ಯಾದಿಗಳ ಆಕಸ್ಮಿಕದಲ್ಲಿ ಸಂಭವಿಸುವ ಘಟನೆಗಳು ಮಾತ್ರವೆಂದು ಅರ್ಥವಲ್ಲ. ಹಾವು ಕಚ್ಚುವುದು, ನೀರಿನಲ್ಲಿ ಮುಳುಗಿ ಸಾಯುವುದು, ಮರಣದಿಂದ ಅಥವಾ ಎತ್ತರ ಪ್ರದೇಶದಿಂದ ಬಿದ್ದು ಸಾಯುವುದು, ಮನೆಯಲ್ಲಿಯೂ ಸಂಭವಿಸಬಹುದಾದ ಆಕಸ್ಮಿಕ ಜಾರಿಕೆಯಿಂದ ಹಲವೊಮ್ಮೆ ಸಂಭವಿಸಬಹುದಾದ ಸಾವು-ಅಥವಾ ಅಂಗವಿಕಲತೆ, ಒಟ್ಟಿನಲ್ಲಿ ಉದ್ದೇಶಪೂರ್ಣವಲ್ಲದ, ಆಕಸ್ಮಿಕವಾಗಿ ಸಂಭವಿಸುವ ಯಾವುದೇ ರೀತಿಯ ಅಪಘಾತ ಅಥವಾ ಅನಾಹುತದಿಂದ ಸಂಭವಿಸುವ ಸಾವು ಅಥವಾ ಅಂಗವಿಕಲತೆಯನ್ನು ಈ ವಿಮೆ ಒಳಗೊಂಡಿರುತ್ತದೆ.

ಈ ವಿಮೆಯ ಪ್ರಕಾರ ಅಪಘಾತದಿಂದ ಸಾವು ಸಂಭವಿಸಿದಾಗ ರೂ. 12,000/- ವನ್ನು ಕೊಡಲಾಗುತ್ತದೆ. ಅಪಘಾತದಲ್ಲಿ ಎರಡೂ ಕಣ್ಣುಗಳು ಅಥವಾ ಎರಡೂ ಕೈಗಳು ಅಥವಾ ಎರಡೂ ಕಾಲುಗಳನ್ನು ಕಳೆದುಕೊಂಡಲ್ಲಿ ರೂ. 12,000/- ವನ್ನು ಕೊಡಲಾಗುವುದು. ಒಂದು ಕೈ ಅಥವಾ ಒಂದು ಕಾಲು ಅಥವಾ ಒಂದು ಕಣ್ಣು ಕಳೆದುಕೊಂಡಲ್ಲಿ ರೂ. 6,000/- ವನ್ನು ಕೊಡಲಾಗುವುದು. ಅಪಘಾತದಿಂದಾಗಿ ಶಾಶ್ವತ, ಪೂರ್ಣ ಅಂಗವಿಕಲತೆ ಸಂಭವಿಸಿದಲ್ಲಿ ರೂ. 12,000/- ವನ್ನು ಕೊಡಲಾಗುವುದು. ಅಪಘಾತದಿಂದ ಆಸ್ಪತ್ರೆಯ ಖರ್ಚಿಗಾಗಿ ರೂ. 240/- ನ್ನು ಕೊಡಲಾಗುವುದು.

ಈ ವಿಮೆಯ ಪ್ರಕಾರ ವರ್ಷಕ್ಕೆ ಕೊಡುವ ರೂ. 12/- ನ್ನು

ಹೊಂದಿರುಗಿಸದ ಕಾರಣ, ಈ ವಿಮೆ ಲಾಭದಾಯಕವಲ್ಲ ಎಂದು ವಾದ ಮಾಡುವವರೂ ಇದ್ದಾರೆ. ಅಪಘಾತಗಳಿಂದ ಸಂಭವಿಸುವ ಸಾವು ಮತ್ತು ಅಂಗವಿಕಲತೆಗೆ ಸ್ವಲ್ಪ ಮಟ್ಟಿನ ಪರಿಹಾರ ರೂಪದಲ್ಲಿ ಕೊಡುವ ಈ ಹಣವನ್ನು ಲಾಭ ನಷ್ಟದ ದೃಷ್ಟಿಯಲ್ಲಿ ನೋಡುವುದು ಸರಿಯಲ್ಲ. ನಮಗೆ ಏನೂ ಅಪಘಾತಗಳು ಸಂಭವಿಸದಿದ್ದ ಪಕ್ಷದಲ್ಲಿ, ಈ ವಿಮೆ ಪಾಲಿಸಿ ಪಡೆದ ಮತ್ತಾರಿಗೋ ಅಪಘಾತ ಸಂಭವಿಸುವ ಸಂದರ್ಭದಲ್ಲಿ ಆ ಅದೃಷ್ಟ ಹೀನರ ನೆರವಿಗೆ ನಮ್ಮ ಹಣ ಒಂದು ಕಿರುಕಾಣಿಕೆ ಎಂಬ ವಿಶಾಲ ಭಾವನೆ ಯನ್ನು ಬೆಳೆಸಿಕೊಳ್ಳಬೇಕು. ಪ್ರತಿಯೊಬ್ಬರೂ ಎಲ್ಲರಿಗಾಗಿ, ಎಲ್ಲರೂ ಪ್ರತಿಯೊಬ್ಬರಿಗಾಗಿ ಎಂಬ ತತ್ವದ ಮೇಲೆ ಈ ವಿಮೆಯ ವ್ಯವಸ್ಥೆ ಮುಂದು ವರೆಯುತ್ತದೆ. ಹೆಚ್ಚು ಹೆಚ್ಚು ಜನ ಇಂತಹ ವಿಮೆಯ ಪಾಲಿಸಿಗಳನ್ನು ಪಡೆದು ಪ್ರೋತ್ಸಾಹಿಸಿದಾಗ ಮಾತ್ರ, ಈ ವ್ಯವಸ್ಥೆ ಮುಂದುವರೆಯುವ ಹಾಗೂ ಅದೃಷ್ಟಹೀನರಿಗೆ ನೆರವಾಗುವ ಸಾಧ್ಯತೆ ಇದೆ.

ಅಂತೆಯೇ, ಅಪಘಾತಗಳಿಗೆ ಒಳಗಾಗುವ ಸಾಧ್ಯತೆ ಇರುವ ಹಾಗೂ ಅಂತಹ ಸ್ಥಳಗಳಲ್ಲಿ ಕೆಲಸಮಾಡುವ ಪ್ರತಿಯೊಬ್ಬರೂ ಈ ವಿಮೆಯ ಪಾಲಿಸಿ ಪಡೆಯುವುದು ಒಳ್ಳೆಯದು. ಬಸ್ಸು, ಲಾರಿ, ಕಾರು, ಮೋಟಾರು ಸೈಕಲ್ಲುಗಳನ್ನು ನಡೆಸುವವರು, ಯಂತ್ರಗಳ ಬಳಿ ಕೆಲಸ ಮಾಡುವವರು, ಕಟ್ಟಡ ಕಟ್ಟುವ ಕೆಲಸಗಳಲ್ಲಿ ತೊಡಗಿರುವವರು, ಗಣಿ, ಕಾರ್ಖಾನೆಗಳಲ್ಲಿ ಕೆಲಸ ಮಾಡುವವರು, ವಿದ್ಯುತ್ ರಿಪೇರಿ ಕೆಲಸಗಳಲ್ಲಿ ತೊಡಗಿರುವವರು, ಅಪಾಯಕಾರಿ ದೈಹಿಕ ಶ್ರಮಗಳಲ್ಲಿ ತೊಡಗಿರುವ ಎಲ್ಲರೂ ಈ ವಿಮೆ ಯನ್ನು ಪಡೆಯುವುದು ಒಳ್ಳೆಯದು. ಜೀವವಿಮೆಯನ್ನು ಮಾಡಿಸಲಾ ಗದ ಹಾಗೂ ಜೀವವಿಮೆಗೆ ಹಣವನ್ನು ತಪ್ಪದೆ ಕಟ್ಟಲಾಗದ ಬಡವ ರ್ಗದ ಜನರೂ ಜನತಾ ವಿಮೆಯನ್ನು ಪಡೆಯಬಹುದು. ವರ್ಷಕ್ಕೆ ಹನ್ನೆರಡು ರೂ. ಗಳನ್ನು ಈ ವಿಮೆಗೋಸ್ಕರ ಖರ್ಚು ಮಾಡುವುದು ಕಷ್ಟವೇನಲ್ಲ.

ಒಟ್ಟಿನಲ್ಲಿ ದೈಹಿಕಶ್ರಮದಲ್ಲಿ ತೊಡಗಿರುವ, ಅಪಾಯಕರ ಪರಿ

ಸ್ಥಿತಿಗಳನ್ನೇ ಎದುರಿಸಬೇಕಾದಂತಹ ಕೆಲಸಗಳಲ್ಲಿ ತೊಡಗಿರುವ ಎಲ್ಲ ಬಡ ಜನರೂ, ತಮಗೊದಗಬಹುದಾದ ಅಪಘಾತಗಳಿಂದ ತಮ್ಮ ಮನೆಯವರಿಗೆ ಉಂಟಾಗುವ ಕಷ್ಟಗಳನ್ನು ನೆನೆಸಿಕೊಂಡು, ಈ ವಿಮೆಯ ಬಗೆಗೆ ಯೋಚಿಸಿ, ಸಂಬಂಧಪಟ್ಟವರಲ್ಲಿ ವಿಚಾರಿಸಿ, ಇದರ ಸೌಲಭ್ಯವನ್ನು ಪಡೆಯುವುದು ಸೂಕ್ತ.

## ರಕ್ಷಣೆ ಅನಿವಾರ್ಯ

ಯಾವುದೇ ವಿಮಾ ಕಂಪನಿಯ ಪರವಾಗಿ ಈ ಮಾತುಗಳನ್ನು ನಾವು ಹೇಳುತ್ತಿಲ್ಲ. ಕುಟುಂಬದ ಎಲ್ಲ ಸದಸ್ಯರ ಕ್ಷೇಮದ ದೃಷ್ಟಿಯಿಂದ ವಿಮೆ ಅನಿವಾರ್ಯ ಎನ್ನುವುದಷ್ಟೆ ನಮ್ಮ ಉದ್ದೇಶ.

ಸೀಮಿತ ಆದಾಯವನ್ನು ಅವಲಂಬಿಸಿರುವ ಎಲ್ಲ ಜನರಿಗೂ ವಿಮೆ, ಕಡ್ಡಾಯ ಉಳಿತಾಯವೆನಿಸುತ್ತದೆ. ಬರುವ ಎಲ್ಲ ಆದಾಯವನ್ನೂ ಹೇಗೋ ಖರ್ಚು ಮಾಡಿದರೆ, ದುಡಿಯುವ ವ್ಯಕ್ತಿಯ ಇಳಿ ವಯಸ್ಸಿನಲ್ಲಿ ಮತ್ತು ಆತನ ಕುಟುಂಬಕ್ಕೆ ಒಂದಿಷ್ಟು ಹಣ ಬೇಡವೆ ? ಇದಕ್ಕೂ ಹೆಚ್ಚಿನದಾಗಿ, ದುಡಿಯುವ ವ್ಯಕ್ತಿಯ ಆಕಸ್ಮಿಕ ಮರಣದಿಂದ, ಮನೆಯ ಯಜಮಾನನನ್ನೇ ಕಳೆದುಕೊಂಡು ಧೈರ್ಯಗುಂದುವ ಆತನ ಕುಟುಂಬಕ್ಕೆ ಚೇತರಿಸಿಕೊಳ್ಳಲು ತತ್‌ಕ್ಷಣದ ಆರ್ಥಿಕ ನೆರವು ಬೇಡವೇ ? ಅಂತೆಯೆ, ಮೇಲಿನ ಕಠಿಣ ಸಂದರ್ಭಗಳಲ್ಲಿ ವಿಮೆ ಸ್ವಲ್ಪ ಮಟ್ಟಿನ ಪರಿಹಾರವೆನಿಸುವುದಿಲ್ಲವೆ ? ಯೋಚಿಸಿ ನೋಡಿ.

ಹೌದು, ಪ್ರತಿ ವಿವಾಹಿತ ವ್ಯಕ್ತಿಯೂ ತನ್ನ ಆತ್ಮೀಯ ವ್ಯಕ್ತಿಗಳ ಕ್ಷೇಮ ಮತ್ತು ಭವಿಷ್ಯದ ದೃಷ್ಟಿಯಿಂದ, ತನ್ನ ಕುಟುಂಬಕ್ಕೆ ವಿಮೆಯ ರಕ್ಷೆಯನ್ನು ಒದಗಿಸುವುದು ಅವಶ್ಯಕ.

ಜೀವವಿಮೆಯನ್ನು ಪಡೆದ ವ್ಯಕ್ತಿ ಗಮನದಲ್ಲಿಟ್ಟುಕೊಳ್ಳಬೇಕಾದ ಇನ್ನೊಂದು ಅಂಶವಿದೆ. ನಿಯಮಿತ ಅವಧಿಯಲ್ಲಿ ವಿಮೆಗೆ ಕಟ್ಟಬೇಕಾದ

ಹಣವನ್ನು ತಪ್ಪದೆ ವಿಮಾ ಆಫೀಸಿಗೆ ತಲುಪಿಸಿ, ರಶೀದಿ ಪಡೆಯುವುದು ಅತಿ ಮುಖ್ಯ. ಅಂದರೆ ವಿಮೆಯ ಪಾಲಿಸಿ ಜೀವಂತವಾಗಿರುವಂತೆ ನೋಡಿ ಕೊಳ್ಳುವುದು ಒಂದು ಮುಖ್ಯ ಜವಾಬ್ದಾರಿ. ಪಾಲಿಸಿ ಜೀವಂತವಾಗಿರದ ಪಕ್ಷದಲ್ಲಿ ಅಂದರೆ, ಕಾಲ ಕಾಲಕ್ಕೆ ವಿಮೆಯ ಹಣದ ಕಂತನ್ನು ಕಟ್ಟದೆ ಇದ್ದ ಸಂದರ್ಭದಲ್ಲಿ ಸಾವು ಸಂಭವಿಸಿದಾಗ ಸಂಬಂಧಪಟ್ಟವರಿಗೆ ವಿಮೆಯ ಪೂರ್ಣ ಲಾಭ ದೊರೆಯುವುದಿಲ್ಲ. ಈ ದೃಷ್ಟಿಯಿಂದ ತಪ್ಪದೆ ಹಣವನ್ನು ತಲುಪಿಸುವುದು, ಪಾಲಿಸಿಯನ್ನು ಭದ್ರವಾಗಿರಿಸಿಕೊಂಡಿರುವುದು, ಹಾಗೂ ರಶೀದಿಗಳನ್ನು ಕಾಪಾಡಿಕೊಳ್ಳುವುದು ಅವಶ್ಯಕ. ಆಗ ಮಾತ್ರ ಆಕಸ್ಮಿಕ ಗಳ ಸಂದರ್ಭಗಳಲ್ಲಿ ಆತನನ್ನು ಅವಲಂಬಿಸಿರುವವರಿಗೆ ಯಾವ ತೊಂದ ರೆಯೂ ಇಲ್ಲದೆ ವಿಮೆಯ ಹಣ ದೊರೆಯುತ್ತದೆ.

## ಉಳಿತಾಯ

ಕುಟುಂಬದ ಕಷ್ಟದ ದಿನಗಳಿಗೋಸ್ಕರ ಮತ್ತು ಮಕ್ಕಳು ಬೆಳೆದಂತೆ ಸಂಭವಿಸುವ ಅನೇಕ ಖರ್ಚುಗಳನ್ನು ಸರಿದೂಗಿಸಲು, ಪ್ರತಿ ಕುಟುಂಬವೂ ತನ್ನ ಆದಾಯದ ಸ್ವಲ್ಪ ಭಾಗವನ್ನು ಉಳಿತಾಯದಲ್ಲಿ ತೊಡಗಿಸುವುದು ಅವಶ್ಯಕ. ನಾಳಿನ ಯೋಜನೆಯಿಲ್ಲದೆ, ಬರುವ ಪೂರ್ಣ ಆದಾಯವನ್ನು ಖರ್ಚು ಮಾಡುತ್ತಾ ಬಂದಲ್ಲಿ, ಮುಂದೆ ಕಷ್ಟದ ದಿನಗಳನ್ನು ಎದುರಿಸ ಬೇಕಾಗುತ್ತದೆ.

ಉಳಿತಾಯ ಯೋಜನೆಗಳು ಹಲವಾರು. ತಮ್ಮ ಅವಶ್ಯಕತೆ ಮತ್ತು ಆದಾಯಕ್ಕೆ ಅನುಗುಣವಾಗಿ, ಅವುಗಳಲ್ಲಿ ಸೂಕ್ತವಾದುದನ್ನು ಆಯ್ಕೆ ಮಾಡಿಕೊಂಡು, ಹಣವನ್ನು ತೊಡಗಿಸುವುದು ಒಳ್ಳೆಯದು. ಜೀವ ವಿಮೆಯೂ ಒಂದು ಉಳಿತಾಯ ಯೋಜನೆಯೇ ಆಗಿರುತ್ತದೆ. ದುಡಿಮೆ ಯಿಂದ ನಿವೃತ್ತಿ ಹೊಂದಿದ ಮೇಲೆ ಹಣ ಕೈ ಸೇರುವ, ಮಗಳ ವಿವಾಹ ಸಮಯಕ್ಕೆ ಹಣ ಸಿಗುವಂತಹ ಮತ್ತು ಮಗನ ವಿದ್ಯಾಭ್ಯಾಸಕ್ಕೆ ನೆರವಾ ಗಬಲ್ಲಂತಹ, ನಾನಾ ರೀತಿಯ ಯೋಜನೆಗಳು ಜೀವವಿಮೆಯಲ್ಲಿಯೂ ಇವೆ.

ಬ್ಯಾಂಕ್‌ಗಳಲ್ಲಿ ಹಾಗೂ ಪೋಸ್ಟ್ ಆಫೀಸಿನಲ್ಲಿಯೂ ನಾನಾ ರೀತಿಯ ಉಳಿತಾಯ ಯೋಜನೆಗಳಿವೆ. ಮೇಲಿನ ಎಲ್ಲ ಉಳಿತಾಯ ಯೋಜನೆಗಳಲ್ಲಿಯೂ ನಾನಾ ರೀತಿಯ ಅನುಕೂಲ ಮತ್ತು ಲಾಭ ಇದೆ. ಒಂದು ಉಳಿತಾಯ ಯೋಜನೆಯಿಂದ ಮತ್ತೊಂದು ಯೋಜನೆಗೆ ಲಾಭ ಮತ್ತು ಅನುಕೂಲಗಳು ವ್ಯತ್ಯಾಸವಾಗಬಹುದು.

ಒಟ್ಟಿನಲ್ಲಿ ತಮ್ಮ ಆದಾಯದಲ್ಲಿ ಎಷ್ಟು ಹಣವನ್ನು ಉಳಿತಾಯ ಮಾಡಲು ಸಾಧ್ಯವೋ ಅಷ್ಟನ್ನು, ತಮಗೆ ಹೆಚ್ಚು ಅನುಕೂಲಕರ ಹಾಗೂ ಲಾಭದಾಯಕವೆನಿಸುವ ಉಳಿತಾಯ ಯೋಜನೆಯಲ್ಲಿ ತೊಡಗಿಸುವುದು ಅತ್ಯಂತ ಆವಶ್ಯಕ.

# ಕುಟುಂಬ ಕಲ್ಯಾಣ

ಒಂದು ಕುಟುಂಬದ ಕಲ್ಯಾಣ ಎಂದರೆ, ಕುಟುಂಬದ ಸರ್ವತೋಮುಖ ಅಭಿವೃದ್ಧಿ ಎಂದರ್ಥ; ಆರ್ಥಿಕ, ಸಾಮಾಜಿಕ ಮತ್ತು ಮಾನಸಿಕವಾಗಿ ತೃಪ್ತಿಕರ ಹಂತವನ್ನು ಮುಟ್ಟುವುದು ಎಂದರ್ಥ. ಆರ್ಥಿಕ, ಸಾಮಾಜಿಕ ಮತ್ತು ಮಾನಸಿಕ ಅಂಶಗಳು ಒಂದಕ್ಕೊಂದು ಪೂರಕವಾಗಿರುವಂತಹವು; ಅಂತಿಮವಾಗಿ ಕುಟುಂಬ ಕಲ್ಯಾಣವನ್ನು ಸಾಧಿಸುವಂತಹವು. ಇವುಗಳಲ್ಲಿ ಯಾವುದೇ ಒಂದು ಅಂಶದ ಕೊರತೆ, ಮತ್ತೊಂದು ಅಂಶದ ಮೇಲೆ ಪ್ರಭಾವವನ್ನು ಬೀರಬಲ್ಲದು. ಅಂತೆಯೆ, ಹಣದ ಮುಗ್ಗಟ್ಟಿನಿಂದಾಗಿ ಮನೆಯಲ್ಲಿ ನೆಮ್ಮದಿಗೆ ಧಕ್ಕೆ ಉಂಟಾಗಬಹುದು. ಹಾಗೂ ಸಾಮಾಜಿಕ ಸಂಬಂಧಗಳ ಮೇಲೂ ಪ್ರಭಾವ ಬೀರಬಹುದು. ಮನೆಯ ಒಟ್ಟು ವಾತಾವರಣ ಅಹಿತಕರವೆನಿಸಬಹುದು.

ಎಲ್ಲ ಕುಟುಂಬಗಳ ವರಮಾನವೂ ಒಂದೇ ತೆರನಾಗಿರುವುದಿಲ್ಲ. ಆದರೆ ಎಲ್ಲ ಕುಟುಂಬಗಳೂ, ಕುಟುಂಬ ಕಲ್ಯಾಣವನ್ನು ಸಾಧಿಸಬಹುದು. ಕಾರಣ, ಒಂದು ಕುಟುಂಬದ ತೃಪ್ತಿಯ ಜೀವನಕ್ಕೆ ಉತ್ತಮ ವರಮಾನ ಅತ್ಯವಶ್ಯವೆನಿಸಿದರೂ, ವರಮಾನವೇ ನಿರ್ಣಾಯಕ ಅಂಶವೇನಲ್ಲ. ವರಮಾನಕ್ಕೆ ಅನುಗುಣವಾದ ವೆಚ್ಚ ಮತ್ತು ಸಂಸಾರದ ಅಚ್ಚುಕಟ್ಟುತನ, ಕುಟುಂಬಕ್ಕೆ ನೆಮ್ಮದಿಯನ್ನು ತಂದುಕೊಡಬಲ್ಲದು. ಸೀಮಿತ ಆದಾಯದಲ್ಲಿಯೇ ಪರಸ್ಪರ ಹೊಂದಾಣಿಕೆಯ, ನೆಮ್ಮದಿಯ ಜೀವನವನ್ನು ನಡೆಸುವುದು ಕುಟುಂಬ ಕಲ್ಯಾಣವೆನಿಸುತ್ತದೆ. ಒಂದು ಕುಟುಂಬದ ಕಲ್ಯಾಣ ಹಲವು ಯೋಜಿತ ಕಾರ್ಯಕ್ರಮಗಳನ್ನು ಅವಲಂಬಿಸಿರುತ್ತದೆ. ಹಲವು ವಿಷಯಗಳ ಬಗೆಗೆ ದೀರ್ಘ ಚಿಂತನೆ, ಯೋಜಿತ ಕಾರ್ಯಕ್ರಮ, ಹಲವು ಅನವಶ್ಯಕ ಚಟುವಟಿಕೆಗಳನ್ನು ತಡೆಗಟ್ಟುವುದು ಮತ್ತು ಉತ್ತಮ ವ್ಯವಸ್ಥೆಯಿಂದ ಒಂದು ಕುಟುಂಬದ ಕಲ್ಯಾಣವನ್ನು ಸಾಧಿಸಬಹುದು.

## ಚಿಕ್ಕ ಸಂಸಾರ

ಚಿಕ್ಕ ಸಂಸಾರ ಸುಖಕ್ಕೆ ಆಧಾರ, ಮಕ್ಕಳ ಮಿತ ದೇಶಕ್ಕೆ ಹಿತ, ಇತ್ಯಾದಿ ಘೋಷಣೆಗಳಿಂದ ಕೂಡಿದ ಕುಟುಂಬ ಕಲ್ಯಾಣ ಕಾರ್ಯಕ್ರಮ ಗಳ ಬಗೆಗೆ ಎಲ್ಲರಿಗೂ ಪರಿಚಯವಿದೆ.

ಜನಸಂಖ್ಯೆಯು ಹೆಚ್ಚಳ ಯಾವುದೇ ರಾಷ್ಟ್ರದ ಅಭಿವೃದ್ಧಿಗೆ ಅಡ್ಡಿಯಾಗಬಲ್ಲದು. ಅಂತೆಯೆ ದೇಶದ ಹಿತದೃಷ್ಟಿಯಿಂದ ಚಿಕ್ಕ ಕುಟುಂಬ ಗಳ ಬಗೆಗೆ ಪ್ರಚಾರ ನಡೆಯುತ್ತಿದೆ. ನಾವು, ದೇಶದ ಅಭಿವೃದ್ಧಿಯಷ್ಟು ದೊಡ್ಡ ಮಾತನಾಡುವುದು ಬೇಡ, ನಮ್ಮ ನಮ್ಮ ಕುಟುಂಬಗಳ ಸೌಖ್ಯದ ಬಗೆಗೆ ಯೋಚನೆ ಮಾಡಿದರೂ ಸಹ, ಚಿಕ್ಕ ಸಂಸಾರ, ಕುಟುಂಬದ ಎಲ್ಲರ ಸುಖಕ್ಕೆ ಆಧಾರ ಎನ್ನುವುದು ಸ್ಪಷ್ಟ.

ಹೆಚ್ಚು ಮಕ್ಕಳು ಯಾವುದೇ ಕುಟುಂಬದ ಎಲ್ಲ ರೀತಿಯ ಪ್ರಗತಿಗೆ ತೊಡಕಾಗಬಲ್ಲವು. ಆದರಲ್ಲಿಯೂ ಕಡಿಮೆ ವರಮಾನದ ಕುಟುಂಬಗಳಲ್ಲಿ ಹೆಚ್ಚು ಮಕ್ಕಳು ಎಂದರೆ, ಹೆಚ್ಚು ಬಡತನ, ಅಶಾಂತಿ, ಅತೃಪ್ತಿ, ಕಷ್ಟಗಳು, ರೋಗ ರುಜಿನಗಳು ಎಂದೇ ಅರ್ಥ. ಬಡತನ, ರೋಗ, ಅತೃಪ್ತಿ, ಅಶಾಂತಿ ಇವುಗಳೆಲ್ಲ ಒಂದು ವಿಷ ವರ್ತುಲವಿದ್ದಂತೆ. ಹೆಚ್ಚು ಮಕ್ಕಳನ್ನು ಹೊಂದಿದ ಮಧ್ಯಮ ಮತ್ತು ಕಡಿಮೆ ಆದಾಯದ ಕುಟುಂಬಗಳು ಪ್ರಮುಖ ವಾಗಿ ಹೆಚ್ಚು ಕಷ್ಟಗಳ ಪರಂಪರೆಯನ್ನು ಅನುಭವಿಸಬೇಕಾಗುತ್ತದೆ. ಅಂತಹ ಕುಟುಂಬಗಳಲ್ಲಿ ಯಾರಿಗೂ ಸುಖವಿಲ್ಲ, ಯಾರಿಗೂ ನೆಮ್ಮದಿಯಿಲ್ಲ.

ಅಂತೆಯೆ, ಕುಟುಂಬದ ಹೊಣೆ ಹೊತ್ತ ಪ್ರತಿ ವ್ಯಕ್ತಿಯೂ ಚಿಕ್ಕ ಕುಟುಂಬದ ಲಾಭಗಳ ಬಗೆಗೆ ಯೋಚಿಸಬೇಕು. ಆ ಮೂಲಕ ಕುಟುಂಬ ಸೌಖ್ಯವನ್ನು ಸಾಧಿಸಬೇಕು.

ಒಬ್ಬರು ಅಥವಾ ಇಬ್ಬರು ಮಕ್ಕಳನ್ನು ಹೊಂದಿದ ಕುಟುಂಬ, ತನ್ನ ಕಡಿಮೆ ಆದಾಯವನ್ನು ವ್ಯವಸ್ಥಿತವಾಗಿ ಖರ್ಚುಮಾಡಲು ಸಾಧ್ಯ. ಮಕ್ಕಳ ನಾನಾ ಆವಶ್ಯಕತೆಗಳನ್ನು ಪೂರೈಸಲು, ವಿದ್ಯಾಭ್ಯಾಸವನ್ನು ಮತ್ತು

ಅವರ ಭವಿಷ್ಯವನ್ನು ಉತ್ತಮಪಡಿಸಲು ಸಾಧ್ಯವಾಗುತ್ತದೆ. ಕಡಿಮೆ ಮಕ್ಕಳನ್ನು ಹೆರುವುದರ ಕಾರಣದಿಂದಾಗಿ ಪ್ರಮುಖವಾಗಿ ಮನೆಯಾಕೆಯ ಆರೋಗ್ಯ ಸುಧಾರಿಸುತ್ತದೆ. ಮಕ್ಕಳು ಬೆಳೆದಂತೆ, ತಾಪತ್ರಯಗಳು ಕಡಿಮೆ ಯೆನಿಸಿ, ಕುಟುಂಬದಲ್ಲಿ ಆರೋಗ್ಯ, ನೆಮ್ಮದಿ, ಶಾಂತಿ, ಸೌಖ್ಯ ನೆಲೆಸುತ್ತವೆ.

ತನ್ನ ಕುಟುಂಬದ ಸೌಖ್ಯಕ್ಕೋಸ್ಕರ ಸೂಕ್ತ ನಿರ್ಧಾರವನ್ನು ಕೈಗೊಳ್ಳಬೇಕಾದ ಹೊಣೆ ಪತಿಯ ಮೇಲಿದೆ. ಈ ಬಗೆಗೆ ತನ್ನ ಪತ್ನಿಗೆ ತಿಳಿವಳಿಕೆಯನ್ನು ಕೊಡಬೇಕು. ಕುಟುಂಬ ನಿಯಂತ್ರಣಕ್ಕೆ ಸಂಬಂಧಪಟ್ಟ ಪುಸ್ತಕಗಳನ್ನು ಓದುವುದು, ವೈದ್ಯರ ಸಲಹೆಯನ್ನು ಪಡೆಯುವುದು ಹಾಗೂ ಕುಟುಂಬ ಕಲ್ಯಾಣ ಇಲಾಖೆಯಲ್ಲಿ ಸಂಬಂಧಪಟ್ಟವರನ್ನು ವಿಚಾರಿಸುವ ಮೂಲಕ, ಈ ದಿಸೆಯಲ್ಲಿ ಸರಕಾರದಿಂದ ದೊರೆಯುವ ಸೌಲಭ್ಯಗಳನ್ನೂ ಪಡೆಯಬಹುದು. ಒಟ್ಟಿನಲ್ಲಿ, ಕಡಿಮೆ ಮಕ್ಕಳನ್ನು ಹೊಂದುವುದರಿಂದ ಕುಟುಂಬದಲ್ಲಿ ಹೆಚ್ಚು ಸೌಲಭ್ಯ, ಸುಖ ಮತ್ತು ನೆಮ್ಮದಿ ಸಾಧ್ಯವೆನ್ನುವುದನ್ನು ಎಲ್ಲರೂ ಮನಗಾಣಬೇಕು.

## ಮದ್ಯಪಾನ

ಅನೇಕ ಕುಟುಂಬಗಳ ನೆಮ್ಮದಿಯ 'ಜೀವನಕ್ಕೆ ಪ್ರಬಲ ಶತ್ರು ಮದ್ಯಪಾನ; ಅದರಲ್ಲಿಯೂ ಮಿತಿ ಮೀರಿದ ಮದ್ಯಪಾನ. ಮಿತವಾದ ಮದ್ಯಪಾನದಿಂದ ಯಾರಿಗೂ ಕೆಡುಕಿಲ್ಲ ಎಂದು ವಾದಿಸಿದರೂ ಸಹ, ದುರಾದೃಷ್ಟವಶಾತ್, ಮಿತವಾಗಿ ಪ್ರಾರಂಭಿಸಿ ಅಂತಿಮವಾಗಿ ಅತಿಯಾಗಿರುವಂತಹ ಪ್ರಕರಣಗಳೂ ಸಾಕಷ್ಟು. ಮದ್ಯಪಾನದ ಚಟಕ್ಕೆ ಒಳಗಾದ ವ್ಯಕ್ತಿ. ಕ್ರಮೇಣ ತನ್ನ ಮೇಲಿನ ಹತೋಟಿಯನ್ನೇ ಕಳೆದುಕೊಳ್ಳುವ ಸಾಧ್ಯತೆಯೇ ಹೆಚ್ಚು. ಆದ್ದರಿಂದಲೆ ಕುಟುಂಬ ಕಲ್ಯಾಣಕ್ಕೆ ಇದೊಂದು ಮಾರಕ.

ಕುಡಿತದ ಚಟ ಅನೇಕ ಜನರ ಆರೋಗ್ಯ, ಸುಖ, ಸಂತೋಷ, ಸ್ಥಾನ ಮಾನಗಳೆಲ್ಲವನ್ನೂ ಹಾಳು ಮಾಡಿದೆ. ಅಸಂಖ್ಯ ಜನರ ಉತ್ತಮ

ಭವಿಷ್ಯವನ್ನು, ಮನೆತನದ ಗೌರವವನ್ನು, ಸಂಸಾರದ ನೆಮ್ಮದಿಯನ್ನು ಹಾಳುಮಾಡಿದೆ. ಕುಡಿತದ ಚಟದಿಂದಾಗಿ ಇದ್ದ ಆಸ್ತಿಯನ್ನು ಕಳೆದು ಕೊಂಡಿರುವ, ಕೆಲಸವನ್ನು ಕಳೆದುಕೊಂಡಿರುವ, ಕೊನೆಗೆ ನಿರ್ಗತಿಕರಾಗಿ ಮಕ್ಕಳು ಮಡದಿಯನ್ನು ಅತ್ಯಂತ ಕಷ್ಟದ ಸ್ಥಿತಿಗೆ ತಂದೊಡ್ಡಿರುವ ಪ್ರಕರಣಗಳೂ ಸಾಕಷ್ಟು ಕಂಡುಬರುತ್ತವೆ.

ಮದ್ಯ 'ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ, ಮೈಬಣ್ಣ ಹೆಚ್ಚಿಸು ತ್ತದೆ, ಆರೋಗ್ಯ ಸುಧಾರಿಸುತದೆ, ಇತ್ಯಾದಿ ಮಾತುಗಳೆಲ್ಲ ಜನರನ್ನು ತಪ್ಪು ಹಾದಿಗೆಳೆಯುವಂತಹವು; ಕ್ರಮೇಣ ಹೆಂಡದ ಗುಲಾಮನನ್ನಾಗಿ ಮಾಡುವಂತಹವು. ಬೆವರು ಸುರಿಸಿ ದುಡಿಯುವಂತಹ ಬಡ ಜನರಂತೂ ಹೆಂಡದ ಬಗೆಗೆ ಬಹಳ ಎಚ್ಚರಿಕೆಯಿಂದಿರಬೇಕು. ಹಾಲು, ಹಣ್ಣು ತುಪ್ಪ, ಒಳ್ಳೆಯ ಊಟ, ಇವೆಲ್ಲ ಇರಲಿ, ಎರಡು ಹೊತ್ತಿನ ಊಟಕ್ಕೆ ಬಹಳ ಕಷ್ಟ ಪಡಬೇಕಾದ ಜನ, ಹೊಟ್ಟೆಯ ತುಂಬ ಶೀಸೆಗಟ್ಟಲೆ ಹೆಂಡ ಸುರಿದು ಕೊಂಡರೆ, ಹೆಂಡ ಯಾವ ಜೀರ್ಣಶಕ್ತಿಯನ್ನು ಹೆಚ್ಚಿಸಬೇಕು, ಏನನ್ನು ಜೀರ್ಣಿಸಬೇಕು? ಬಹುಶಃ ಹೊಟ್ಟೆಯ ಕರುಳನ್ನೇ ಜೀರ್ಣಿಸಬೇಕಷ್ಟೆ. ಹೆಂಡದ ಚಟಕ್ಕೆ ಬಲಿಯಾದ ಬಡಜನರ ಆರೋಗ್ಯ ಪೂರ್ಣ ಹಾಳಾಗು ವುದಕ್ಕೆ ಇದೇ ಮುಖ್ಯ ಕಾರಣ. ಸಂಸಾರದಲ್ಲಿ ಬಡತನ, ಗಲಾಟೆ, ಹೊಡೆ ದಾಟ, ನರಳಾಟ ಹೆಚ್ಚುತ್ತವೆ. ಸಂಸಾರ ನರಕವೆನಿಸುತ್ತದೆ. ಕುಡಿತದ ಚಟಕ್ಕೆ ಬಲಿಯಾಗಿರುವ ಅಥವಾ ಕುಡಿಯುವುದನ್ನು ಪ್ರಾರಂಭಿಸಿರುವ ಜನರು ತಮ್ಮ ಮಕ್ಕಳು ಮತ್ತು ಹೆಂಡತಿ ನಗು ನಗುತ ಸುಖ ಸಂಸಾರ ಸಾಗಿಸಬೇಡವೆ ಎನ್ನುವುದರ ಬಗೆಗೆ ದೀರ್ಘ ಯೋಚನೆ ಮಾಡಬೇಕು.

ಮದ್ಯ ಮನುಷ್ಯನ ಲಿವರ್, ಮಿದುಳು ಮತ್ತಿತರ ಅಂಗಾಗ ಗಳ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತದೆ ಎನ್ನುವುದು ತಿಳಿದ ವಿಷಯ. ಕಳ್ಳಭಟ್ಟಿ ಮತ್ತು ಅಗ್ಗದ ಬೆಲೆಯ ಹೆಂಡವನ್ನು ಸಾಮಾನ್ಯ ವಾಗಿ ಸೇವಿಸುವಂತಹ ಕಡಿಮೆ ಆದಾಯದ ಜನರು, ಅದರ ಬಗೆಗೆ ಸ್ವಲ್ಪ ತಿಳಿದಿರುವುದು ಉತ್ತಮ. ಕೊಳೆತ ವಸ್ತುಗಳು, ಹುಳುಗಳು ಏತಿಗುಟ್ಟುವ

ಪದಾರ್ಥಗಳು ಮತ್ತು ಅಸಹ್ಯ ಹುಟ್ಟಿಸುವ ಇತರ ಅನೇಕ ಪದಾರ್ಥ ಗಳಿಂದ ಕಳ್ಳಭಟ್ಟಿ ಸಾರಾಯಿಯನ್ನು ತಯಾರಿಸಲಾಗುತ್ತದೆ. ವಿಷಪೂರಿತ ವಸ್ತುಗಳೂ ಅಗ್ಗದ ಬೆಲೆಯ ಸಾರಾಯಿಯಲ್ಲಿ ಕಂಡುಬರುತ್ತವೆ. ಕಳ್ಳ ಭಟ್ಟಿ ಸಾರಾಯಿಯ ದುಷ್ಪರಿಣಾಮ ಭೀಕರವಾದುದು. ಇಂತಹ ಹೆಂಡದ ಸೇವನೆಯಿಂದ ಕುರುಡರಾಗಬಹುದು, ಕೈ ಕಾಲುಗಳನ್ನು ಎಳೆದು ಕೊಂಡು ಓಡಾಡಬೇಕಾದ ಸ್ಥಿತಿ ಬರಬಹುದು, ವಿಪರೀತ ನೋವಿನ ಕಾಯಿಲೆಗಳು ಉಂಟಾಗಬಹುದು. ಅನೇಕ ಸಂದರ್ಭಗಳಲ್ಲಿ ಸಾವುಗಳೂ ಸಂಭವಿಸಬಹುದು. ಕಡಿಮೆ ಬೆಲೆಯದೆಂದು ಕುಡಿದು ಆರೋಗ್ಯ ಕೆಡಿಸಿ ಕೊಂಡು, ಹೆಂಡತಿ ಮಕ್ಕಳನ್ನು ಗೋಳು ಹೊಯ್ದುಕೊಂಡು, ಅನೇಕ ಸಂದರ್ಭಗಳಲ್ಲಿ ತಾವೂ ಸಾಯುವಂತಹ ಈ ಜನರಿಂದ ಯಾರಿಗೆ ಸುಖ?

ಹಿರಿಯರ ಕುಡಿತದ ಚಟಕ್ಕೆ, ಮಕ್ಕಳು ಶಿಕ್ಷೆಯನ್ನು ಅನುಭವಿಸ ಬೇಕಾದ ಸ್ಥಿತಿ ಮತ್ತೊಂದು ರೀತಿಯದು. ಬಡವರ ಮನೆಯ ಮಕ್ಕಳಂತೂ ಅತಿ ಕಷ್ಟದ ಸ್ಥಿತಿಯನ್ನು ಎದುರಿಸಬೇಕಾಗುತ್ತದೆ. ಬೆಳೆಯುವ ಮಕ್ಕಳಿಗೆ ಬೇಕಾದ ಉತ್ತಮ ಆರೈಕೆ, ಹಿರಿಯರ ಪ್ರೀತಿಯ ರಕ್ಷಣೆ, ಉತ್ತಮ ಮಾರ್ಗದರ್ಶನ ಇವೆಲ್ಲವುಗಳಿಂದ ಮಕ್ಕಳು ವಂಚಿತರಾಗುತ್ತಾರೆ. ದೈಹಿಕ ವಾಗಿ ಮತ್ತು ಮಾನಸಿಕವಾಗಿ ಅಸಮರ್ಪಕ ರೀತಿಯಲ್ಲಿ ಬೆಳೆಯುತ್ತಾರೆ. ಚಟಕ್ಕೆ ಬಲಿಯಾದ ವ್ಯಕ್ತಿ, ಮನೆಯ ಮತ್ತು ಮಕ್ಕಳ ಎಲ್ಲ ಆವಶ್ಯಕತೆ ಗಳನ್ನು ನಿರ್ಲಕ್ಷಿಸುತ್ತಾನೆ. ಸರಿಯಾಗಿ ಅನ್ನಬಟ್ಟೆ ಕಾಣದೆ, ಪ್ರೀತಿ ವಿಶ್ವಾಸಗಳಿಗೆ ಬದಲಾಗಿ, ಬೈಗಳು ಮತ್ತು ಹೊಡೆತಗಳನ್ನು ತಿನ್ನುವ, ಸರಿಯಾದ ಮಾರ್ಗದರ್ಶನವನ್ನೇ ಕಾಣದ ಮಕ್ಕಳು, ಮುಂದೆ ಹೇಗೆ ತಾನೇ ಉತ್ತಮ ಪ್ರಜೆಗಳಾದಾರು? ಇಂತಹ ಮಕ್ಕಳಲ್ಲಿ ಹೆಚ್ಚು ಜನ ಕೆಟ್ಟ ಚಟಗಳಿಗೆ ಬಲಿಯಾದರೆ, ಕಳ್ಳತನಗಳಲ್ಲಿ ತೊಡಗಿದರೆ ಆಶ್ಚರ್ಯವೇನಿಲ್ಲ.

ಕುಡಿತದ ಚಟ, ಕುಟುಂಬದ ಹೆಣ್ಣು ಮಕ್ಕಳ ಮೇಲೆ ಮತ್ತೊಂದು ರೀತಿಯ ದುಷ್ಪರಿಣಾಮವನ್ನು ಬೀರುತ್ತದೆ. ಪ್ರಮುಖವಾಗಿ ಮಧ್ಯಮ ವರ್ಗದ ಜನರ ಹೆಣ್ಣು ಮಕ್ಕಳು, ತಮ್ಮ ಅಪ್ಪನ ಕುಡಿತದ ಚಟಕ್ಕೆ

ಅನೇಕ ಸಂದರ್ಭಗಳಲ್ಲಿ ಬಾರಿ ಬೆಲೆಯನ್ನು ತೆರಬೇಕಾಗುತ್ತದೆ. ಅಪ್ಪ ಕುಡುಕ ಅಥವಾ ಇಂತಹವರ ಮನೆ ಕುಡುಕರ ಮನೆ ಎನ್ನುವ ಕಾರಣ ದಿಂದ ಆ ಮನೆಯ ಮಗಳನ್ನು ಸೊಸೆಯಾಗಿ ತಂದುಕೊಳ್ಳಲು ಒಪ್ಪದೇ ಇರುವ ಪ್ರಕರಣಗಳು ಸಾಕಷ್ಟು ಇವೆ. ಕುಡುಕನ ಮಗಳಾಗಿ ಹುಟ್ಟಿದ ಅಥವಾ ಕುಡುಕರ ಮನೆಯಲ್ಲಿ ಬೆಳೆದ ಕಾರಣಕ್ಕಾಗಿ ಅನೇಕ ಹೆಣ್ಣು ಮಕ್ಕಳ ಮದುವೆ ಬಹಳ ನಿಧಾನವಾಗಬಹುದು, ಉತ್ತಮ ಸಂಬಂಧಗಳು ಕೈಬಿಟ್ಟು ಹೋಗಬಹುದು, ಮದುವೆಯಾಗುವುದೇ ಕಷ್ಟವೆನಿಸಬಹುದು. ಒಟ್ಟಿನಲ್ಲಿ ಮನೆಯ ಹಿರಿಯನ ಕುಡಿತದ ಚಟದಿಂದ ಮಕ್ಕಳ ಭವಿಷ್ಯ ಹಾಳಾಗುವ ಸಾಧ್ಯತೆ ಇದೆ.

ಸ್ನೇಹಿತರ ಒತ್ತಾಯಕ್ಕೋಸ್ಕರ, ಹಲವು ಪ್ರಸಂಗಗಳಲ್ಲಿ 'ಕಂಪೆನಿ' ಗೋಸ್ಕರ, ಖುಷಿಗೋಸ್ಕರ ಮತ್ತು ಘನತೆಯನ್ನು ಬೆಳೆಸಿಕೊಳ್ಳುವ ದೃಷ್ಟಿ ಯಿಂದ ಕುಡಿತವನ್ನು ಪ್ರಾರಂಭಿಸುವ ಜನರು ಕುಡಿತದ ಬಗೆಗೆ ದೀರ್ಘ ಯೋಚನೆ ಮಾಡಬೇಕು. ತಮಾಷೆ, ಖುಷಿಗೋಸ್ಕರ ಪ್ರಾರಂಭವಾಗುವ ಗುಟುಕು ಹೆಂಡ, ಅನೇಕ ವೇಳೆ ಬೇತಾಳದಂತೆ ಅಂಟಿಕೊಳ್ಳುವ ಸಾಧ್ಯತೆ ಹೆಚ್ಚು. ಆ ಕಾರಣದಿಂದ, ತಮ್ಮ ಆರೋಗ್ಯ, ಭವಿಷ್ಯ, ತಮ್ಮ ಕುಟುಂ ಬದ ನೆಮ್ಮದಿ, ಮಕ್ಕಳ ಪ್ರಗತಿ, ಇವುಗಳನ್ನು ಸದಾ ಗಮನದಲ್ಲಿಟ್ಟುಕೊಂ ಡಿರಬೇಕು. ಕುಡಿತವನ್ನು ಮುಂದುವರಿಸಬೇಕೆ, ತಮ್ಮ ಮಕ್ಕಳು ತಮ್ಮಿಂದ ತಮ್ಮ ಸಹವಾಸ, ವಾತ್ಸಲ್ಯಗಳಿಂದ ದಿನವಿಡೀ ದೂರವಿರಬೇಕೆ, ಮನೆಯ ಗೌರವ, ಸುಖ ಹಾಳಾಗಬೇಕೆ, ನಿರ್ಗತಿಕರಾಗಿ ಕಷ್ಟವನ್ನು ಅನುಭವಿಸಬೇಕೆ ? ಇತ್ಯಾದಿ ಪ್ರಶ್ನೆಗಳನ್ನು ಹಾಕಿಕೊಂಡು ಕುಟುಂಬದ ಎಲ್ಲರ ಆರೋಗ್ಯ, ಸುಖ ಶಾಂತಿಗೋಸ್ಕರ ಮದ್ಯಸೇವನೆಯನ್ನು ಮಾಡುವುದಿಲ್ಲವೆಂದು ನಿರ್ಧಾರವನ್ನು ಕೈಗೊಳ್ಳಬೇಕು. ಈಗಾಗಲೇ ಈ ಅಭ್ಯಾಸವನ್ನು ಬೆಳೆಸಿಕೊಂಡಿರುವವರು ಮದ್ಯದ ಗುಲಾಮರಾಗದಂತೆ ಎಚ್ಚರ ವಹಿಸಬೇಕು; ಅಭ್ಯಾಸ ಚಟವಾಗಿ ಪರಿಣಮಿಸದಂತೆ ಅದನ್ನು ತಮ್ಮ ಹತೋಟಿಯಲ್ಲಿಟ್ಟುಕೊಳ್ಳಲು ಎಚ್ಚರ ದಿಂದಿರಬೇಕು.

## ವ್ಯಭಿಚಾರ

ಹಲವು ವರದಿಗಳ ಪ್ರಕಾರ ಲೈಂಗಿಕ ರೋಗಗಳಿಂದ ನರಳು ತ್ತಿರುವವರ ಸಂಖ್ಯೆ ಪ್ರಪಂಚದಾದ್ಯಂತ ದಿನೇ ದಿನೇ ಹೆಚ್ಚುತ್ತಿದೆ. ಇದು ಅತ್ಯಂತ ಆತಂಕಕಾರೀ ಬೆಳವಣಿಗೆ ಎನ್ನಲಾಗಿದೆ. ಕಾರಣ, ಲೈಂಗಿಕ ರೋಗ ಗಳು ಒಂದು ರಾಷ್ಟ್ರದ ಸಾಮಾಜಿಕ ಆರೋಗ್ಯದ ಮೇಲೆ ತೀವ್ರ ಪರಿಣಾಮ ವನ್ನು ಬೀರುವಂತಹ ಅಂಶ.

ಲೈಂಗಿಕ ರೋಗಗಳಿಗೆ ಮೂಲ ಕಾರಣ ಒಂದನೆಯದಾಗಿ, ವೇಶ್ಯಾ ವೃತ್ತಿ. ಎರಡನೆಯದಾಗಿ ಸ್ವಚ್ಛಂದ ಲೈಂಗಿಕ ಜೀವನ, ಅಂದರೆ, ಪತ್ನಿ ಯೊಂದಿಗೆ ಮಾತ್ರವಲ್ಲದೆ, ಅನೇಕರೊಡನೆ ಅನಿರ್ಬಂಧಿತವಾಗಿ ಹೊಂದಿರು ವಂತಹ ಲೈಂಗಿಕ ಸಂಬಂಧ. ಭಾರತದಲ್ಲಿ ಲೈಂಗಿಕ ರೋಗಗಳಿಗೆ ಪ್ರಮುಖ ಮೂಲ ವೇಶ್ಯಾವೃತ್ತಿ. ಆದರೆ ಸ್ವಚ್ಛಂದ ಲೈಂಗಿಕ ಜೀವನದ ಗಾಳಿಯೂ ಮುಕ್ತ ಜೀವನದ ಹೆಸರಿನಲ್ಲಿ ಅಲ್ಲಲ್ಲಿ ಬೀಸುತ್ತಿದೆ ಎನ್ನುವುದು ಹಾಗೂ ಗುಟ್ಟಿನಲ್ಲಿ, ಕಳ್ಳತನದಲ್ಲಿ ಇಂತಹ ವ್ಯವಹಾರಗಳು ನಡೆಯುತ್ತಿರುತ್ತವೆ ಎನ್ನುವುದೂ ವಾಸ್ತವ. ವೈವಾಹಿಕ ಸಂಬಂಧದ ಹೊರಗಿನ ಲೈಂಗಿಕ ಸಂಬಂಧ, ಅಂದರೆ ವ್ಯಭಿಚಾರ, ಒಂದು ಅಪಾಯಕಾರೀ ಚಿಹ್ನೆ. ಇದರಿಂದ ಉದ್ಭವವಾಗುವ ರೋಗಗಳಿಂದ ಮಾತ್ರವೇ ಅಲ್ಲದೆ, ಕುಟುಂಬ ಜೀವನದ ಮೇಲೆ ಉಂಟಾಗುವ ಇತರ ದುಷ್ಪರಿಣಾಮಗಳ ದೃಷ್ಟಿಯಿಂದ, ವ್ಯಭಿಚಾರ ಕುಟುಂಬ ಸೌಖ್ಯಕ್ಕೆ ಒಂದು ಕಂಟಕ.

ವ್ಯಭಿಚಾರದಿಂದ ಉಂಟಾಗುವ ಲೈಂಗಿಕ ರೋಗಗಳು ಅಥವಾ ಗುಪ್ತ ರೋಗಗಳಲ್ಲಿ ಸಿಫಿಲಿಸ್, ಗೊನೋರಿಯ ಮತ್ತು ಶಾಂಕ್ರಾಯ್ಡ್ ಮುಖ್ಯವಾದವುಗಳು. ಅವರಲ್ಲಿಯೂ ಮೊದಲ ಎರಡು ರೋಗಗಳು ಹೆಚ್ಚು ಮಾರಕವಾದಂತಹವುಗಳು. ಸಿಫಿಲಿಸ್ ಗಂಡಸರಲ್ಲಿಯೂ ಮತ್ತು ಗೊನೋರಿಯಾ ಹೆಂಗಸರಲ್ಲಿಯೂ ಹೆಚ್ಚು ವ್ಯಾಪಕವಾಗಿ ಕಂಡುಬರು ವಂತಹವು.

ಸಿಫಿಲಿಸ್ ರೋಗ ಮೊದಲಿಗೆ ಗುಪ್ತಾಂಗದ ಮೇಲೆ ಅಥವಾ ಅದರ ಹತ್ತಿರ ಹುಣ್ಣಿನಂತೆ ಕಾಣಿಸಿಕೊಳ್ಳುತ್ತದೆ. ಮೂರರಿಂದ ಆರು ವಾರಗಳ ಅವಧಿಯಲ್ಲಿ ಈ ಹುಣ್ಣು ಕಡಿಮೆಯಾಗಿ ಗಂಟಲಿನ ಹುಣ್ಣು, ಚರ್ಮದ ತುರಿಕೆ, ತಲೆಯ ನೋವು, ರಸ ಗ್ರಂಥಿಗಳು ದೊಡ್ಡದಾಗುವುದು ಇತ್ಯಾದಿ ಕಾಣಿಸಿಕೊಳ್ಳುತ್ತವೆ. ಈ ಚಿಹ್ನೆಗಳನ್ನು ನಿರ್ಲಕ್ಷಿಸಿದ ಪಕ್ಷದಲ್ಲಿ ಇವು ಕ್ರಮೇಣ ಕಡಿಮೆಯಾದಂತೆನಿಸಿ ಈ ಕಾಯಿಲೆ, ಹೃದಯ, ಪಿತ್ತ ಜನಕಾಂಗ, ಸ್ನಾಯುಗಳ ವ್ಯವಸ್ಥೆ, ಮೂಳೆ ಅಥವಾ ಇನ್ನಾವುದೇ ಪ್ರಮುಖ ಅಂಗವನ್ನು ಶಿಥಿಲಗೊಳಿಸಲು ಪ್ರಾರಂಭಿಸುತ್ತದೆ. ಸಿಫಿಲಿಸ್ ರೋಗ ಬುದ್ಧಿ ಭ್ರಮಣೆ, ಪಾರ್ಶ್ವವಾಯು, ಸಾವು ಅಥವಾ ಜೀವಮಾನ ಪೂರ್ಣ ನಿಶ್ಶಕ್ತಿಗೆ ಮತ್ತು ದೇಹದ ಕೀಲುಗಳ ಊತಕ್ಕೆ ಕಾರಣವಾಗಬಹುದು. ಸಿಫಿಲಿಸ್ ರೋಗದಿಂದ ನರಳುತ್ತಿರುವ ಸ್ತ್ರೀಯರು ಗರ್ಭಿಣಿಯರಾದರೆ ಅದರ ಪರಿಣಾಮ ಭೀಕರ. ಹುಟ್ಟುವ ಮಕ್ಕಳು ಕುರುಡರಾಗಿರುವುದು, ಕಿವುಡರಾಗಿರುವುದು, ಶರೀರದಲ್ಲಿ ವಿಕಾರ ಸ್ವರೂಪಗಳು ಇತ್ಯಾದಿ ವೈಪರೀತ್ಯಗಳಿಂದ ಕೂಡಿರುವ ಸಾಧ್ಯತೆ ಹೆಚ್ಚು.

ಗೊನೋರಿಯ ಮತ್ತೊಂದು ಮಾರಕವಾದ ಲೈಂಗಿಕ ರೋಗ. ಸಿಫಿಲಿಸ್‌ಗಿಂತ ಹತ್ತು ಪಟ್ಟು ಪದೇ ಪದೇ ಕಾಣಿಸಿಕೊಳ್ಳುವಂತಹುದು. ಈ ರೋಗಾಣುಗಳ ಸಂಪರ್ಕವನ್ನು ಪಡೆದ ಎರಡರಿಂದ ಹತ್ತು ದಿನಗಳ ನಂತರ ಗುಪ್ತಾಂಗದಿಂದ ಗಡುಸಾದ ಹಳದಿ ವರ್ಣದ ರಸ ಹೊರಬರಲು ಪ್ರಾರಂಭಿಸುತ್ತದೆ. ಇದರೊಂದಿಗೆ ಮಂಡಿ, ಮಣಿಕಟ್ಟು, ಹಿಮ್ಮಡಿ ಇತ್ಯಾದಿ ಕಡೆಗಳಲ್ಲಿ ಬಿಗಿತ ಅಥವಾ ರಕ್ತ ನಂಜಾಗಿ ಪರಿವರ್ತಿಸುವುದು ಇತ್ಯಾದಿ ಕಾಣಿಸಿಕೊಳ್ಳುತ್ತದೆ. ಗೊನೋರಿಯ ಅನೇಕ ಮಹಿಳೆಯರಲ್ಲಿ ಬಂಜೆತನಕ್ಕೆ ಕಾರಣವಾಗಬಹುದು. ಲೈಂಗಿಕ ರೋಗದಿಂದ ನರಳುತ್ತಿರುವ ಸ್ತ್ರೀ ಹುಟ್ಟುವ ತನ್ನ ಮಕ್ಕಳಿಗೆ ಈ ರೋಗವನ್ನು ಹರಡಬಹುದು. ಅಂತಹ ಮಕ್ಕಳು ಸತ್ತು ಹುಟ್ಟಬಹುದು ಅಥವಾ ಅಂಗವಿಕಲತೆಯನ್ನು ಹೊಂದಬಹುದು.

ವೇಶ್ಯಾವೃತ್ತಿ ಕುಟುಂಬಕ್ಕೆ ಹಲವು ರೀತಿಯಲ್ಲಿ ಧಕ್ಕೆಯನ್ನುಂಟು ಮಾಡುತ್ತದೆ. ವೇಶಾವೃತ್ತಿಯಿಂದಾಗಿ ಅಂಟಿಕೊಂಡ ಲೈಂಗಿಕ ರೋಗ ಕುಟುಂಬದ ಇತರ [ಸದಸ್ಯರುಗಳಿಗೆ ಮಾರಕವಾಗಬಹುದು. ಗಂಡ ಅಥವಾ ಹೆಂಡತಿಯ ಪೈಕಿ ಯಾರೊಬ್ಬರು ಗುಪ್ತ ವ್ಯವಹಾರವನ್ನಿಟ್ಟು ಕೊಂಡು ಲೈಂಗಿಕ ರೋಗದಿಂದ ನರಳುತ್ತಿದ್ದರೂ ಸಹ, ಅದು ಮುಗ್ಧ ರಾದ ಮತ್ತೊಬ್ಬರಿಗೂ ಅಂಟುವ ಸಂಭವ ಹೆಚ್ಚು. ಅಲ್ಲದೆ ಮುಂದೆ ಹುಟ್ಟುವ ಮಕ್ಕಳ ಮೇಲೂ ಸಹ ಅದು ಪರಿಣಾಮವನ್ನು ಬೀರುತ್ತದೆ.

ವೇಶ್ಯಾವೃತ್ತಿಯಿಂದ ಅನೇಕ ಕುಟುಂಬಗಳು ಶಿಥಿಲವಾಗುವ ಹಾಗೂ ಬೇರ್ಪಡುವ ಸಾಧ್ಯತೆಯೂ ಇದೆ. ವೇಶ್ಯಾಸಂಪರ್ಕದಿಂದಾಗಿ ತನ್ನ ಮನೆ ಮತ್ತು ಮನೆಯ ಸದಸ್ಯರುಗಳ ಬಗೆಗೆ ಉದಾಸೀನ ಭಾವನೆ ಬೆಳೆಯುತ್ತದೆ. ವೇಶ್ಯಾವೃತ್ತಿಯಲ್ಲಿನ ಯಾಂತ್ರಿಕ ಮತ್ತು ಕ್ಷಣಿಕ ಸುಖ ಕ್ಕಾಗಿ, ತನ್ನ ಸಂಸಾರದ ಸೌಖ್ಯ ಮತ್ತು ಬೇಡಿಕೆಗಳನ್ನು ನಿರ್ಲಕ್ಷಿಸಿ, ಗಳಿಕೆಯ ಹೆಚ್ಚಿನ ಪಾಲನ್ನು ಖರ್ಚುಮಾಡಿ, ಹಲವು ಸಂದರ್ಭಗಳಲ್ಲಿ ಆಸ್ತಿಯನ್ನು ಕಳೆದುಕೊಂಡು, ಕೊನೆಗೆ ತನ್ನ ಸಂಸಾರವನ್ನು ಬಡತನದ ದವಡೆಗೆ ದೂಡಿರುವಂತಹ ನಿದರ್ಶನಗಳೂ ಇವೆ.

ವೇಶ್ಯಾಸಂಪರ್ಕದಿಂದ ಪತ್ನಿ ಮತ್ತು ಮಕ್ಕಳು, ಮನೆಯ ಯಜ ಮಾನನ ಪ್ರೀತಿಯಿಂದ ವಂಚಿತರಾಗುತ್ತಾರೆ. ಪತಿ ಪತ್ನಿಯರ ನಡುವೆ ಮನಸ್ತಾಪ, ಕಲಹ ಇತ್ಯಾದಿ ಪ್ರಾರಂಭವಾಗಿ, ಗೃಹ ಅಶಾಂತಿಯ ಬೀಡಾಗ ಬಹುದು. ದಂಪತಿಗಳಲ್ಲಿ ಹೊಂದಾಣಿಕೆ ಪೂರ್ಣವಾಗಿ ಕಡಿದು ಹೋಗ ಬಹುದು. ಅನೇಕ ಸಂದರ್ಭಗಳಲ್ಲಿ ಈ ವಿಷಯದಿಂದಾಗಿ ಕುಟುಂಬ ಒಡೆದು ಹೋಗುವ ಸಾಧ್ಯತೆಯೂ ಇದೆ.

ವೇಶ್ಯಾಸಂಪರ್ಕದಿಂದಾಗಿ ಸಂಬಂಧಪಟ್ಟ ವ್ಯಕ್ತಿಯ ವೈಯಕ್ತಿಕ ಸ್ಥಾನಮಾನ, ಸಮಾಜದಲ್ಲಿನ ಗೌರವ ಮರ್ಯಾದೆಗಳಿಗೆ ಚ್ಯುತಿ ಬರುವು ದರ ಜೊತೆಗೆ, ಕುಟುಂಬದ ಇತರ ಸದಸ್ಯರುಗಳಿಗೂ ಸಾಮಾಜಿಕ ಕಳಂಕ

ತಪ್ಪುತ್ತದೆ. ಕುಟುಂಬದ ಎಲ್ಲ ಸದಸ್ಯರುಗಳೂ ಸಮಾಜದ ನಿಕೃಷ್ಟ ನೋಟಕ್ಕೆ ಒಳಗಾಗುತ್ತಾರೆ. ಅಂತಹವರ ಮಕ್ಕಳ ಭವಿಷ್ಯಕ್ಕೆ ತಡೆಯುಂಟಾಗುತ್ತದೆ. ಅದರಲ್ಲಿಯೂ ಹೆಣ್ಣು ಮಕ್ಕಳ ಭವಿಷ್ಯ ಕ್ರೂರವೆನಿಸುತ್ತದೆ. ತಂದೆ ವ್ಯಭಿಚಾರಿ ಎನ್ನುವ ಕಾರಣದಿಂದ, ಆ ಮನೆಯ ಮಗಳನ್ನು ಸೊಸೆಯನ್ನಾಗಿ ತಂದುಕೊಳ್ಳಲು ಹಿಂಜರಿಯುವ ಪ್ರಸಂಗಗಳಿವೆ. ಅನೇಕ ಉತ್ತಮ ಸಂಬಂಧಗಳು ಕೈ ತಪ್ಪಿ ಹೋಗಬಹುದು; ಗಂಡು ಸಿಗುವುದು ಬಹಳ ನಿಧಾನವಾಗಬಹುದು. ಒಟ್ಟಿನಲ್ಲಿ ಮನೆಯ ಯಜಮಾನನ ವೇಶ್ಯಾ ಸಂಪರ್ಕದ ಸಾಮಾಜಿಕ ಕಳಂಕದಿಂದಾಗಿ, ಹೆಣ್ಣು ಮಕ್ಕಳ ವಿವಾಹದ ವಿಷಯಗಳು ಸುಲಭವಾಗಿ ಇತ್ಯರ್ಥವಾಗಲಾರವು.

ಆರೋಗ್ಯದ ದೃಷ್ಟಿಕೋನದ ಬದಲು ನೈತಿಕ ದೃಷ್ಟಿಕೋನದಿಂದ ಈ ವಿಷಯವನ್ನು ಒಮ್ಮೆ ಪರಿಶೀಲಿಸೋಣ. ತನ್ನ ಪತ್ನಿ ಪತಿವ್ರತೆಯಾಗಿರಬೇಕೆಂದು ನಿರೀಕ್ಷಿಸುವ ಪತಿ, ತಾನೂ ಪತ್ನಿವ್ರತಸ್ಥನಾಗಿರಬೇಡವೆ? ಪತ್ನಿಯ ಮೇಲೆ ಶಂಕೆ ಪಡುವ, ಅವಳ ಎಲ್ಲ ಚಲನ ವಲನಗಳನ್ನೂ ಗಮನಿಸುವ ಹಾಗೂ ಅವಳಿಂದ ಪೂರ್ಣ ಸಮರ್ಪಣಾಭಾವವನ್ನು ನಿರೀಕ್ಷಿಸುವ ಪತಿ, ತಾನು ಮಾತ್ರ ತನಗಿಷ್ಟಬಂದಂತೆ ಇರುತ್ತೇನೆ ಎನ್ನುವುದು ಸರಿಯೆ, ಇದು ದ್ವಂದ್ವ ನೈತಿಕ ನಿಯಮವೆನಿಸುವುದಿಲ್ಲವೆ? ಇದು ಪ್ರತಿಯೊಬ್ಬ ಪತಿಯೂ ಯೋಚಿಸಬೇಕಾದ ವಿಷಯ.

## ದುಶ್ಚಟಗಳು

ಹಲವು ಅಭ್ಯಾಸ ಅಥವಾ ಚಟುವಟಿಕೆಗಳನ್ನು ಒಮ್ಮೆಲೆ ದುಶ್ಚಟಗಳೆಂದು ಕರೆಯುವುದು ಕಷ್ಟ. ಅನೇಕ ಅಭ್ಯಾಸ ಅಥವಾ ಚಟುವಟಿಕೆಗಳು, ಒಬ್ಬರ ಆರ್ಥಿಕ ಸ್ಥಿತಿಗತಿ ಹಾಗೂ ಎಷ್ಟು ಕಾಲ, ಹಣ ಮತ್ತು ಶ್ರಮವನ್ನು ಅದಕ್ಕೋಸ್ಕರ ವಿನಿಯೋಗಿಸುತ್ತಾರೆ ಎನ್ನುವುದನ್ನು ಅವಲಂಬಿಸಿ, ಯಾವುದೇ ಒಂದು ಅಭ್ಯಾಸ ಅಥವಾ ಚಟ, ಒಬ್ಬರ ಮಟ್ಟಿಗೆ ದುಶ್ಚಟವೆನಿಸಿಕೊಳ್ಳಬಹುದು; ಹಾಗೆಯೇ ಇತರರ ಮಟ್ಟಿಗೆ ಒಂದು ಮನರಂಜ

ನೆಯ ಸಾಧನವೆನಿಸಿಕೊಳ್ಳಬಹುದು. ಕುದುರೆಯ ಜೂಜು, ಇಸ್ಪೀಟು ಆಟ ಮತ್ತು ಬೀಡಿ ಸಿಗರೇಟು ಸೇದುವಿಕೆ ಅಂತಹ ಕೆಲವು ಚಟಗಳೆನಿಸುತ್ತವೆ. ಇವೆಲ್ಲವುಗಳನ್ನೂ ಎಲ್ಲ ಸಂದರ್ಭಗಳಲ್ಲಿಯೂ ದುಶ್ಚಟಗಳೆಂದು ಪರಿಗಣಿಸಲಾಗುವುದಿಲ್ಲ. ಆದರೆ, ಇವುಗಳಲ್ಲಿ ಯಾವುದೇ ಅಭ್ಯಾಸ, ವ್ಯಕ್ತಿ ಮತ್ತು ಕುಟುಂಬ ಸೌಖ್ಯಕ್ಕೆ ಧಕ್ಕೆಯೆನಿಸುವ ಮಟ್ಟಿಗೆ ಬೆಳೆದಾಗ, ಅದು ದುಶ್ಚಟವೇ ಆಗುತ್ತದೆ.

ಕುದುರೆಯ ಜೂಜು ಅತಿ ಶ್ರೀಮಂತರ ಮಟ್ಟಿಗೆ ಮಾತ್ರ ಸೀಮಿತವಾಗಿಲ್ಲ. ಮಧ್ಯಮ ವರ್ಗದ ಹಲವರೂ ಸಹ, ತಮ್ಮ ಅದೃಷ್ಟ ಪರೀಕ್ಷೆಗೋಸ್ಕರ, ಪಂದ್ಯದಲ್ಲಿ ಹಣ ತೊಡಗಿಸುವುದು ಕಂಡುಬರುತ್ತದೆ. ಒಮ್ಮೆಲೆ ಶ್ರೀಮಂತರಾಗಬೇಕೆಂಬ ಬಯಕೆ, ಪದೇ ಪದೇ ತಮ್ಮ ಅದೃಷ್ಟವನ್ನು ಪರೀಕ್ಷಿಸಿಕೊಳ್ಳಲು ಹಲವರನ್ನು ಪ್ರೇರೇಪಿಸುತ್ತದೆ. ಆದರೆ ಎಲ್ಲರಿಗೂ ಅದೃಷ್ಟ ಒಲಿಯಲು ಸಾಧ್ಯವಿಲ್ಲ. ಯಾರೊಬ್ಬರಿಗೆ ಅದೃಷ್ಟ ಒಲಿದರೂ ಇತರ ಬಹಳ ಜನರು ಅದೃಷ್ಟಹೀನರಾಗಬೇಕು. ಅಂತೆಯೆ, ಸಾಕಷ್ಟು ಹಣ ಕಳೆದುಕೊಂಡು ತಮ್ಮ ಸಂಸಾರಗಳನ್ನು ಕಷ್ಟಕ್ಕೀಡು ಮಾಡಿರುವ ನಿದರ್ಶನಗಳೂ ಇವೆ. ಆದ್ದರಿಂದ ಅದೃಷ್ಟ ಪರೀಕ್ಷೆಗೂ ಒಂದು ಮಿತಿ ಅಗತ್ಯ. ಹಾಗೂ ತಮ್ಮ ಆರ್ಥಿಕ ಮಟ್ಟವನ್ನು ಅನುಸರಿಸಿ, ಇಂತಹ ಪಣಗಳು ತಮಗೆ ಯೋಗ್ಯವೇ ಅಥವಾ ಇಲ್ಲವೆ ಎನ್ನುವುದನ್ನು ತಾವೇ ನಿರ್ಧರಿಸಿಕೊಳ್ಳಬೇಕು.

ಇಸ್ಪೀಟು ಆಟ ಬಹಳ ವ್ಯಾಪಕವಾಗಿ ಚಲಾವಣೆಯಲ್ಲಿರುವ ಒಂದು ಅಭ್ಯಾಸ. ಕೇವಲ ಬೇಸರ ಕಳೆಯಲು ಎಂದು ಪ್ರಾರಂಭವಾಗುವ ಈ ಅಭ್ಯಾಸ, ಬಹಳ ಜನರ ಅಮೂಲ್ಯ ವೇಳೆಯನ್ನೆಲ್ಲ ಹಾಳುಮಾಡಿರುವುದುಂಟು. ಇಸ್ಪೀಟು ಚಟ ಆರ್ಥಿಕವಾಗಿ ಅಂತಹ ಪ್ರಮಾದವನ್ನೇನೂ ಮಾಡುವುದಿಲ್ಲ ಎಂದು ಹೇಳಿದರೂ ಸಹ, ಇಲ್ಲಿಯೂ ಪಣವಾಗಿ ತೊಡಗಿಸುವಂತಹ ಹಣ, ಹಲವರ ಕೈ ಕಚ್ಚುವುದು ಸಹಜ. ಈ ಅಭ್ಯಾಸದೊಂದಿಗೆ ಸಾಮಾನ್ಯವಾಗಿ ಅಂಟಿಬರುವ ಮದ್ಯದ ಚಟ, ಒಬ್ಬ ವ್ಯಕ್ತಿಯ ಆದಾಯದ ಮೇಲೆ ಪರಿಣಾಮವನ್ನು ಬೀರಬಲ್ಲದು. ಇವೆಲ್ಲದಕ್ಕೂ

ಹೆಚ್ಚಿನದಾಗಿ, ಈ ಚಟದಿಂದ ಹೆಚ್ಚಿನ ಕಾಲವನ್ನು ಕುಟುಂಬದ ಹೊರಗಡೆ ಕಳೆಯುವ ಸಾಧ್ಯತೆ, ದಿನದ ದುಡಿಮೆಯ ನಂತರ ಆಫೀಸುಗಳಿಂದ ನೇರ ವಾಗಿ ಇಸ್ಪೀಟು ಆಡುವ ಕ್ಲಬ್‌ಗಳಿಗೆ ಹೋಗುವ ಜನರು, ಹಾಗೂ ರಾತ್ರಿ ಬಹಳ ಹೊತ್ತಿನ ನಂತರ ಮನೆಗೆ ಹಿಂದಿರುಗುವ ಜನರು ಸಾಕಷ್ಟು ಕಂಡು ಬರುತ್ತಾರೆ. ದಿನವಿಡೀ ಮನೆಯಲ್ಲಿ ದುಡಿಯುವ ಮಹಿಳೆ, ಹೊರಗಡೆ ಅಡ್ಡಾಡಲು ಬಯಸುವುದು, ತನ್ನ ಪತಿಯ ಸಾಮಿಪ್ಯವನ್ನು ಬಯಸುವುದು ತಪ್ಪೆ? ಇದಕ್ಕೆ ಪ್ರತಿಯಾಗಿ, ನಾನಾ ಕಾರಣಗಳನ್ನೊಡ್ಡಿ ಹೆಚ್ಚಿನ ಕಾಲ ವನ್ನು ಪತಿ, ಮನೆಯ ಹೊರಗಡೆಯೇ ಕಳೆದರೆ ಅದರಿಂದ ಪತ್ನಿಯ ಮನಸ್ಸಿನ ಮೇಲೆ ಏಕಾಕಿತನದಿಂದ ಎಂತಹ ಪರಿಣಾಮ ಉಂಟಾಗಬಹುದು ಎನ್ನುವುದನ್ನು ವಿವೇಚಿಸಬೇಕು. ಇದೇ ರೀತಿ ಮನೆಯ ಮಕ್ಕಳೂ ಸಹ ತಂದೆಯ ಮಾರ್ಗದರ್ಶನ, ಪ್ರೀತಿ ವಿಶ್ವಾಸಗಳಿಂದ ವಂಚಿತರಾಗುತ್ತಾರೆ. ಅಂತೆಯೆ, ಇಸ್ಪೀಟು ಆಟ ಆಡಿದರೂ ಸಹ, ಬೇಸರ ಕಳೆಯುವ ಹಲವು ಸಾಧನಗಳಲ್ಲಿ ಒಂದನ್ನಾಗಿ ಮಿತವಾಗಿ, ಆಗಾಗ್ಗೆ ಬಳಸಬೇಕೇ ಹೊರತು, ಇದೇ ಒಂದು ವೃತ್ತಿಯಾಗಬಾರದು; ಇಡೀ ದಿನದ ಚಟುವಟಿಕೆಯಾಗ ಬಾರದು. ಹಾಗೂ ಕುಟುಂಬದ ನೆಮ್ಮದಿಗೆ ಭಂಗ ತರುವ ಮಟ್ಟಿಗೆ ಇರಲೇಬಾರದು.

ಬೀಡಿ ಸಿಗರೇಟು ಇತ್ಯಾದಿ ಅಭ್ಯಾಸಗಳು ನಿಧಾನವಾಗಿ ಆರೋಗ್ಯದ ಮೇಲೆ ಪ್ರಭಾವ ಬೀರುತ್ತವೆ ಎನ್ನುವುದು ಗೊತ್ತಿರುವ ವಿಷಯ. ಕೆಲವರು ಅತಿಯಾದ ಸೇದುವಿಕೆಯಿಂದ ಆರೋಗ್ಯವನ್ನು ಕೆಡಿಸಿಕೊಳ್ಳುವುದರ ಜೊತೆಗೆ ಗಣನೀಯವಾದ ಹಣವನ್ನು ಇದರ ಮೇಲೆ ಖರ್ಚು ಮಾಡುತ್ತಾರೆ ಎನ್ನು ವುದು ನಿಜ. ಅಂತೆಯೆ, ತಮ್ಮ ಆರ್ಥಿಕ ಸ್ಥಿತಿ ಹಾಗೂ ಆರೋಗ್ಯವನ್ನು ಗಮನದಲ್ಲಿಟ್ಟುಕೊಂಡು ಇಂತಹ ಅಭ್ಯಾಸವೂ ಸಹ ಅವಶ್ಯವೇ ಅಥವಾ ಇದನ್ನು ನಿಲ್ಲಿಸಲು ಸಾಧ್ಯವಿಲ್ಲವೆ ಎಂದು ಯೋಚಿಸಬೇಕು.

ಒಟ್ಟಿನಲ್ಲಿ, ಹಲವಾರು ಅಭ್ಯಾಸಗಳನ್ನು ದೃಢ ನಿರ್ಧಾರದಿಂದ ನಿಲ್ಲಿಸಬಹುದಾದ ಸಾಧ್ಯತೆ ಇದೆ. ಕನಿಷ್ಠ ಹಲವು ಅಭ್ಯಾಸಗಳನ್ನು

ಮಿತಿಯೊಳಗಿಟ್ಟುಕೊಳ್ಳುವ ಪ್ರಯತ್ನವನ್ನಾದರೂ ಮಾಡಬೇಕು. ಯಾವುದೇ ಅಭ್ಯಾಸ ಅತಿಯಾದರೆ, ಅದು ದುಷ್ಪಟವೇ ಸರಿ, ಹಾಗೂ ಕುಟುಂಬ ಕಲ್ಯಾಣದ ಮೇಲೆ ಕೆಟ್ಟ ಪರಿಣಾಮವನ್ನು ಬೀರುತ್ತದೆ.

## ಮನೆಯ ಪುಸ್ತಕ ಭಂಡಾರ

ಅನಕ್ಷರತೆ ವ್ಯಾಪಕವಾಗಿರುವ ನಮ್ಮ ದೇಶದಲ್ಲಿ ಓದುವ ಹವ್ಯಾಸ ಅತ್ಯಂತ ಕಡಿಮೆ ಇರುವುದು ಸಹಜವೇ ಆಗಿದೆ. ಆದರೆ ವಿದ್ಯಾವಂತ ರಲ್ಲಿಯೂ, ಪುಸ್ತಕಗಳನ್ನು ಓದುವ ಅಭಿರುಚಿ ಕಡಿಮೆಯಾಗಿಯೇ ಇರು ವುದು ದುರದೃಷ್ಟಕರ. ಸ್ವಲ್ಪ ಮಟ್ಟಿಗೆ ಈ ಅಭಿರುಚಿಯನ್ನು ಬೆಳಸಿ ಕೊಂಡಿರುವವರಲ್ಲಿಯೂ ಎಂತಹ ಪುಸ್ತಕಗಳನ್ನು ಓದಬೇಕು ಎನ್ನುವುದರ ಸ್ಪಷ್ಟ ಅಭಿಪ್ರಾಯವಿಲ್ಲದೇ ಇರುವುದೂ ಕಂಡುಬರುತ್ತದೆ. ಅಂತೆಯೆ, ಜೀವನ ಸುಧಾರಿಸುವಂತಹ ಸಾಹಿತ್ಯಕ್ಕೂ ಹೆಚ್ಚಿನದಾಗಿ, ಕ್ಷಣಿಕ ಮಾನಸಿಕ ತೃಪ್ತಿನೀಡುವ ಸಾಹಿತ್ಯವನ್ನೆ ಹೆಚ್ಚಿನ ಜನ ಬಯಸುವುದು ಕಂಡುಬರುತ್ತದೆ.

ವಾಸ್ತವವಾಗಿ ಪ್ರತಿ ಮನೆಯೂ ತನ್ನದೇ ಆದ ಪುಸ್ತಕ ಭಂಡಾರ ವನ್ನು ಹೊಂದಿರಬೇಕು. ಅನೇಕ ಮನೆಗಳಲ್ಲಿ ಧರ್ಮ ಮತ್ತು ದೇವರಿಗೆ ಸಂಬಂಧಪಟ್ಟ ಅನೇಕ ಪುಸ್ತಕಗಳು ಕಂಡುಬರುತ್ತವೆ; ಶಾಸ್ತ್ರ ಗ್ರಂಥಗಳ ಹಾಗೂ ದೇವರ ಸ್ತೋತ್ರಗಳ ಅಧ್ಯಯನ ನಡೆದಿರುತ್ತದೆ. ಆದರೆ ದಿನ ನಿತ್ಯದ ಹಲವು ಸಮಸ್ಯೆ ಮತ್ತು ಸಂಶಯಗಳಿಗೆ ಸಂಬಂಧಪಟ್ಟ ಪುಸ್ತಕ ಗಳನ್ನು ಹೊಂದಿರುವುದು ಹಾಗೂ ಓದುವುದು ಬಹಳ ಕಡಿಮೆ. ಆಧ್ಯಾತ್ಮಿಕ ಚಿಂತನೆಯ ಈ ಪುಸ್ತಕಗಳಿಗೂ ಹೆಚ್ಚಿನದಾಗಿ ನಿಜ ಜೀವನಕ್ಕೆ ಸಂಬಂಧಪಟ್ಟ, ವ್ಯಕ್ತಿ ಮತ್ತು ಕುಟುಂಬದ ಸುಧಾರಣೆಗೆ ಸಂಬಂಧಪಟ್ಟ ಪುಸ್ತಕಗಳನ್ನು ಪ್ರತಿ ಕುಟುಂಬವೂ ಹೊಂದಿರಬೇಡವೆ? ತಮ್ಮ ಮಕ್ಕಳು ಉತ್ತಮ ಪ್ರಜೆಗಳಾಗಬೇಕು, ಮುಂದುವರಿಯಬೇಕು ಎಂದು ಬಯಸುವ ಎಲ್ಲ ಪೋಷಕರೂ, ಮತ್ತು ಮುಂದಿನ ಒಂದು ಪೀಳಿಗೆಯನ್ನೇ ಬೆಳೆಸು ತ್ತಿರುವ ಪ್ರತಿ ಕುಟುಂಬವೂ, ಮಾನವ ಶಿಶುವಿನ ದೈಹಿಕ, ಮಾನಸಿಕ ಮತ್ತು ಸಾಮಾಜಿಕ ಬೆಳವಣಿಗೆಯ ವಿವಿಧ ಹಂತಗಳು ಮತ್ತು ಆವಶ್ಯಕತೆ

ಗಳ ಬಗೆಗೆ ಸಾಕಷ್ಟು ತಿಳಿವಳಿಕೆಯನ್ನು ಹೊಂದಿರಬೇಕು.

ಅಜ್ಞಾನ, ಮೂಢನಂಬಿಕೆಗಳಿರುವ ನಮ್ಮ ಸಮಾಜದಲ್ಲಿ, ಪ್ರತಿ ಕುಟುಂಬವೂ ವೈಜ್ಞಾನಿಕ ಚಿಂತನೆ ಮತ್ತು ಸಂಶೋಧನೆಗಳ ಲಾಭವನ್ನು ಪಡೆದು, ಪ್ರಗತಿ ಹೊಂದಬೇಕಾದರೆ, ಸಂಬಂಧಪಟ್ಟ ಪುಸ್ತಕಗಳನ್ನು ಓದಬೇಕು. ಮಕ್ಕಳನ್ನು ಬೆಳೆಸಬೇಕಾದ ರೀತಿ, ಮಕ್ಕಳಲ್ಲಿ ತಲೆದೋರಬಹುದಾದ ರೋಗಗಳು ಹಾಗೂ ಅವುಗಳಿಗೆ ಚಿಕಿತ್ಸೆ, ಗರ್ಭಿಣಿ ಸ್ತ್ರೀಯ ಆವಶ್ಯಕತೆ ಹಾಗೂ ಆ ಸಂದರ್ಭದಲ್ಲಿ ಕೈಗೊಳ್ಳಬೇಕಾದ ಮುನ್ನೆಚ್ಚರಿಕೆ, ಮಕ್ಕಳು ಬೆಳೆಯುವಾಗ ಹಿರಿಯರು ವಹಿಸಬೇಕಾದ ಪಾತ್ರ, ಅವರನ್ನು ಅರ್ಥಮಾಡಿಕೊಳ್ಳುವಿಕೆ, ಉತ್ತಮ ಆರೋಗ್ಯವನ್ನು ಕಾಪಾಡಿಕೊಳ್ಳಬೇಕಾದರೆ ನಮ್ಮ ಆಹಾರ ಎಂತಿರಬೇಕು, ಪತಿ ಮತ್ತು ಪತ್ನಿಯ ನಡುವಿನ ಸಾಮಾಜಿಕ, ಮಾನಸಿಕ ಮತ್ತು ಲೈಂಗಿಕ ಹೊಂದಾಣಿಕೆ, ಒಟ್ಟು ಕುಟುಂಬ ಎಲ್ಲ ರೀತಿಯಿಂದಲೂ ನೆಮ್ಮದಿಯಿಂದಿರಬೇಕಾದರೆ ಕೈಗೊಳ್ಳಬೇಕಾದ ಕ್ರಮಗಳು; ಹೀಗೆ ಹಲವಾರು ವಿಷಯಗಳಿಗೆ ಸಂಬಂಧಪಟ್ಟ ಮಾಹಿತಿಯನ್ನು ಸೂಕ್ತ ಪುಸ್ತಕಗಳನ್ನು ಓದುವುದರಿಂದ ಪಡೆಯಬಹುದು.

ಅನೇಕ ಸಂಶೋಧನಾ ಕೇಂದ್ರಗಳಲ್ಲಿ ಆಹಾರ, ನೈರ್ಮಲ್ಯ, ಆರೋಗ್ಯ, ಮನೋವಿಜ್ಞಾನಕ್ಕೆ ಸಂಬಂಧಪಟ್ಟಂತೆ ನಿರಂತರ ಅಧ್ಯಯನ ಮತ್ತು ಸಂಶೋಧನೆಗಳು ನಡೆಯುತ್ತಿವೆ. ಅವುಗಳ ಫಲವಾಗಿ ನಿಯತಕಾಲಿಕ ಪತ್ರಿಕೆಗಳು ಮತ್ತು ಪುಸ್ತಕಗಳು ಪ್ರಕಟವಾಗುತ್ತಿರುತ್ತವೆ. ಇವೆಲ್ಲವುಗಳ ಲಾಭವನ್ನು ಜನಸಾಮಾನ್ಯರು ಪಡೆಯಬೇಡವೆ? ಸಕಾಲದಲ್ಲಿ ಇಂತಹ ಪುಸ್ತಕಗಳನ್ನು ಓದುವುದರಿಂದ ಕುಟುಂಬದಲ್ಲಿ ತಲೆದೋರಬಹುದಾದ ಅನೇಕ ಸಮಸ್ಯೆಗಳನ್ನು ನಿವಾರಿಸಬಹುದು. ನೆಮ್ಮದಿಯ ಜೀವನವನ್ನು ನಡೆಸಬಹುದು.

ಎಲ್ಲ ಪುಸ್ತಕಗಳನ್ನೂ ಕೊಂಡು ಓದುವುದು ಎಲ್ಲ ವರ್ಗದ ಜನರಿಗೆ ಸಾಧ್ಯವಾಗುವುದಿಲ್ಲ ಎನ್ನಬಹುದು. ಸರಕಾರ ನಡೆಸುತ್ತಿರುವ ಸಾರ್ವಜನಿಕ ಗ್ರಂಥಾಲಯಗಳಲ್ಲಿ ಇಂತಹ ಅನೇಕ ಪುಸ್ತಗಳು ಲಭ್ಯ.

ಆದರೆ ಎಷ್ಟು ಜನ ಈ ವಿಷಯಗಳ ಬಗೆಗೆ ಆಸಕ್ತಿ ವಹಿಸುತ್ತಾರೆ ಎನ್ನು ವುದು ವಿಚಾರಾರ್ಹ. ಸಾಧ್ಯವಾದ ಮಟ್ಟಿಗೆ ಹಲವು ಪುಸ್ತಕಗಳನ್ನು ಸ್ವತಃ ಖರೀದಿಸಿ ಮನೆಯಲ್ಲಿ ಆವಶ್ಯವೆನಿಸಿದಾಗಲೆಲ್ಲ ಓದಬೇಕು. ಒಟ್ಟಿನಲ್ಲಿ ಜೀವನ ಸುಧಾರಣೆಗೆ ಸಂಬಂಧಪಟ್ಟ ಪುಸ್ತಕಗಳನ್ನು ಕೊಂಡು, ಇಲ್ಲವೆ ಗ್ರಂಥಾಲಯದಿಂದ ತಂದು, ತಾನೂ ಓದಿ, ತನ್ನ ಪತ್ನಿಗೆ ಓದಲು ಹೇಳುವ ಅಥವಾ ಓದಿ ಹೇಳುವ ಹೊಣೆ ಪತಿಯ ಮೇಲೆ ಇದೆ. ಇಂತಹ ಕ್ರಮ ಕುಟುಂಬ ಕಲ್ಯಾಣಕ್ಕೆ ಅತ್ಯಂತ ಸಹಕಾರಿ.

ಕುಟುಂಬ ಕಲ್ಯಾಣಕ್ಕೆ ಸಂಬಂಧಪಟ್ಟ, ಕನ್ನಡದಲ್ಲಿ ಲಭ್ಯವಿರುವ ಪುಸ್ತಕಗಳಲ್ಲಿ ಕೆಲವನ್ನು ಇಲ್ಲಿ ಹೆಸರಿಸಬಹುದು.

ತಾಯಿ ಮತ್ತು ಮಗುವಿನ ಆರೋಗ್ಯದ ವಿಷಯದಲ್ಲಿ ಕೈಗೊಳ್ಳ ಬೇಕಾದ ಮುನ್ನೆಚ್ಚರಿಕೆಗಳನ್ನು ಕುರಿತ ಪುಸ್ತಕಗಳು.

1) ನಿಮ್ಮ ಮಗು

ಲೇ : ಡಾ॥ ಧನ್ಯಕುಮಾರ ಇಜಾರಿ
ಪ್ರ : ಸಮಾಜ ಪುಸ್ತಕಾಲಯ, ಧಾರವಾಡ
ಬೆಲೆ : ರೂ. 5-25

2) ತಾಯಿ-ಮಗು

ಲೇ : ಡಾ॥ ಅನುಪಮಾ ನಿರಂಜನ
ಬೆಲೆ : ರೂ. 5-00

3) ಆಹಾರ ವಿಜ್ಞಾನ

ಕೇಂದ್ರ ಆಹಾರ ಸಂಶೋಧನಾಲಯ (CFTRI) ಮೈಸೂರು, ಇವರು ಎರಡು ತಿಂಗಳಿಗೊಮ್ಮೆ ಪ್ರಕಟಿಸುವ ಪತ್ರಿಕೆ, ವಾರ್ಷಿಕ ಚಂದಾ ರೂ. 2/- (ಅಂಚೆಯ ಮೂಲಕ ಮನೆಗೆ ತಲುಪುವುದು).

4) ನಿಮ್ಮ ಆಹಾರದ ವೈದ್ಯಕೀಯ ರಹಸ್ಯಗಳು, ಭಾಗ I

5) ನಿಮ್ಮ ಆಹಾರದ ವೈದ್ಯಕೀಯ ರಹಸ್ಯಗಳು, ಭಾಗ II

6) ನಿಮ್ಮ ಆಹಾರದ ವೈದ್ಯಕೀಯ ರಹಸ್ಯಗಳು, ಭಾಗ III

ಲೇ : ಡಾ॥ ಅಮಾನ್

ಪ್ರ : ಸೆಕ್ರೆಟರಿ ಇಂಡೊ ಅಮೇರಿಕನ್ ಆಸ್ಪತ್ರೆ
ಎನ್. ಆರ್. ಮೊಹಲ್ಲಾ, ಮೈಸೂರು

ಬೆಲೆ : ಪ್ರತಿ ಭಾಗ ರೂ. 15/–

ಯುವಜನರಿಗೆ ಲೈಂಗಿಕ ವಿಷಯಗಳ ಬಗೆಗೆ ಸೂಕ್ತ ತಿಳಿವಳಿಕೆ ಗೋಸ್ಕರ :

7) ಕೇಳು ಕಿಶೋರಿ

ಲೇ : ಡಾ॥ ಅನುಪಮಾ ನಿರಂಜನ

ಬೆಲೆ :ರೂ 3–00

8) ಕೇಳು ಕಿಶೋರ

ಲೇ : ಡಾ॥ ಎಸ್. ರಾಮರಾವ್

ಬೆಲೆ : ರೂ 3–00

ಅಚ್ಚುಕಟ್ಟಾದ ಸಂಸಾರ ನಿರ್ವಹಣೆಯ ಬಗೆಗೆ ತಿಳಿವಳಿಕೆಯನ್ನು ಕೊಡಲೋಸುಗ :

9) ವೈಭವದ ಮನೆ

ಲೇ : ಶ್ರೀಮತಿ ಜಯಲಕ್ಷ್ಮೀ ಶ್ರೀನಿವಾಸನ್

ಪ್ರ : ಶ್ರೀಮತಿ ಜಯಲಕ್ಷ್ಮೀ ಶ್ರೀನಿವಾಸನ್ "ಮುಕ್ತ"
14, ಹನ್ನೆರಡನೆಯ ಕ್ರಾಸ್ ರೋಡು, ವಿಲ್ಸನ್ ಗಾರ್ಡನ್
ಬೆಂಗಳೂರು–560027

ಬೆಲೆ : ರೂ 15–00

10) ವಧುವಿಗೆ ಉಡುಗೊರೆ

ಲೇ : ಶಾಂತಾದೇವಿ–ಮಾಳವಾಡ

ಪ್ರ : ಸಮಾಜ ಪುಸ್ತಕಾಲಯ, ಧಾರವಾಡ

ಬೆಲೆ : ರೂ 7.50

ಪರಸ್ಪರ ಹೊಂದಾಣಿಕೆಯ ದಾಂಪತ್ಯ ಜೀವನ ಮತ್ತು ಕುಟುಂಬ ಕಲ್ಯಾಣಕ್ಕೆ, ವಧೂ–ವರರಿಗೆ ಹಿತವಚನಗಳು :

11) ವಧುವಿಗೆ ಕಿವಿಮಾತು

ಲೇ : ಡಾ॥ ಅನುಪಮಾ ನಿರಂಜನ

ಬೆಲೆ : ರೂ. 3-00

12) ವರನೊಂದಿಗೆ ಸಮಾಲೋಚನೆ

ಲೇ : ಎಸ್. ರಾಜಶೇಖರ್

(ಮೇಲಿನ 2, 7, 8 ಮತ್ತು 11ನೆಯ ಪುಸ್ತಕಗಳ ಪ್ರಕಾಶಕರು ಡಿ. ವಿ. ಕೆ. ಮೂರ್ತಿ, ಮೈಸೂರು)

ಮೇಲಿನ ವಿಷಯಗಳಿಗೆ ಸಂಬಂಧಪಟ್ಟ ಇನ್ನೂ ಅನೇಕ ಪುಸ್ತಕಗಳು ಇರಬಹುದು; ಮುಂದೆ ಪ್ರಕಟವಾಗಬಹುದು. ಪ್ರತಿ ಕುಟುಂಬವೂ ಅಂತಹ ಪುಸ್ತಕಗಳಲ್ಲಿನ ಒಳ್ಳೆಯ ಅಂಶಗಳನ್ನು ಅರ್ಥ ಮಾಡಿಕೊಂಡು ಅದರಿಂದ ಲಾಭ ಪಡೆಯಬೇಕಾದರೆ ಅಂತಹ ಪುಸ್ತಕಗಳನ್ನು ಪಡೆಯುವ ಮತ್ತು ಅವುಗಳನ್ನು ಅಧ್ಯಯನ ಮಾಡಿ ಸಾಧ್ಯವಾದ ಮಟ್ಟಿಗೆ ಅವುಗಳನ್ನು ಅನುಸರಿಸುವ ದಿಸೆಯಲ್ಲಿ ಪ್ರಯತ್ನ ಮಾಡಬೇಕು. ಕುಟುಂಬದ ಜವಾಬ್ದಾರಿ ಹೊತ್ತ ವ್ಯಕ್ತಿಯಾಗಿ ಪತಿ ತನ್ನ ಮಾರ್ಗದರ್ಶನ ಮತ್ತು ನೆರವನ್ನು ಈ ದಿಸೆಯಲ್ಲಿ ನೀಡಬೇಕು.

# ಸುಖ ಸಂಸಾರ

ಸುಖ ಸಂಸಾರದ ರಹಸ್ಯವೇನು ? ಸಮಾಜದಲ್ಲಿ ಪತಿ ಹೊಂದಿರುವ ಸ್ಥಾನಮಾನ, ಆತನ ಸಂಪಾದನೆ, ಉನ್ನತ ಹುದ್ದೆ ಅಥವಾ ಆತನ ಉಚ್ಚ ಶಿಕ್ಷಣ, ಇವುಗಳಾವುವೂ ಸುಖ ಸಂಸಾರದ ಆಧಾರವಲ್ಲ. ಸುಖ ಸಂಸಾರ ಮೂಲತಃ ಎರಡು ಹೃದಯಗಳ ಪರಸ್ಪರ ಅರ್ಥಮಾಡಿಕೊಳ್ಳುವಿಕೆಯ ಫಲ. ಸುಖ ಸಂಸಾರ, ಪತಿ ಮತ್ತು ಪತ್ನಿಯ ಹೊಂದಾಣಿಕೆಯ, ತೃಪ್ತಿಯ ಮಾನಸಿಕ ಸ್ಥಿತಿ.

ಉತ್ತಮ ಜೀವನಮಟ್ಟಕ್ಕೆ ಕನಿಷ್ಠ ಆರ್ಥಿಕ ವರಮಾನ ಆವಶ್ಯಕ. ಆದರೆ ವರಮಾನವೊಂದೇ, ಒಂದು ಸಂಸಾರವನ್ನು ಸುಖವಾಗಿಡಲಾರದು. ಸಾಕಷ್ಟು ಆಸ್ತಿಯನ್ನು ಹೊಂದಿಯೂ ಅಶಾಂತಿ, ಅತೃಪ್ತಿಯ ಜೀವನವನ್ನು ನಡೆಸುತ್ತಿರುವ ಸಂಸಾರಗಳಿವೆ. ಕಡಿಮೆ ವರಮಾನವನ್ನು ಹೊಂದಿಯೂ ನೆಮ್ಮದಿ ಮತ್ತು ತೃಪ್ತಿಯ ಜೀವನವನ್ನು ನಡೆಸುತ್ತಿರುವ ಸಂಸಾರಗಳಿವೆ. ಅಂದರೆ, ಪತಿ ಮತ್ತು ಪತ್ನಿ, ತಮ್ಮ ತಮ್ಮ ಕರ್ತವ್ಯಗಳನ್ನು ನಿರ್ವಹಿಸುವುದಕ್ಕೂ ಹೆಚ್ಚಿನದಾಗಿ, ಪರಸ್ಪರರ ಅಭಿಪ್ರಾಯ, ಅವಶ್ಯಕತೆ, ಅಭಿರುಚಿ ಮತ್ತು ಕಷ್ಟಗಳನ್ನು ಅರ್ಥ ಮಾಡಿಕೊಂಡು ಪರಸ್ಪರರ ಹಿತಕ್ಕೋಸ್ಕರ ಶ್ರಮಿಸುವುದರಲ್ಲಿ, ಸುಖ ಸಂಸಾರದ ರಹಸ್ಯ ಅಡಗಿದೆ.

ಸಂಸಾರವನ್ನು ಸುಖವಾಗಿಡುವಲ್ಲಿ ಪತಿಯ ಮೇಲೆ ಅತಿ ಹೆಚ್ಚಿನ ಹೊಣೆ ಇದೆ. ಪತಿ ಒಂದು ಸಂಸಾರದ ಆರ್ಥಿಕ ಆಧಾರ, ಸಂಸಾರದ ಅಭಿವೃದ್ಧಿಯಲ್ಲಿ ಮಾರ್ಗದರ್ಶಕ, ಕಷ್ಟದ ಸ್ಥಿತಿಯಲ್ಲಿ ಆತನೊಂದು ಆಸರೆ ಮತ್ತು ನೆಮ್ಮದಿಯ ಜೀವನಕ್ಕೆ ಪ್ರಮುಖ ವ್ಯಕ್ತಿ. ಅಂತೆಯೇ, ಪತಿ, ಸಂಸಾರದ ಸುಖಕ್ಕೆ ತನ್ನ ಪಾಲಿನ ಪಾತ್ರ ಮತ್ತು ಕರ್ತವ್ಯದ ಬಗೆಗೆ ಚಿಂತಿಸಬೇಕು.

# ಹಸನ್ಮುಖಿ

ದಿನದ ದುಡಿಮೆಯ ನಂತರ ಮನೆಗೆ ಹಿಂದಿರುಗುವ ವೇಳೆಗೆ ಪತಿ ಸಾಕಷ್ಟು ದಣಿದಿರಬಹುದು. ಹೊಲಗದ್ದೆಗಳಲ್ಲಿ ದುಡಿಮೆ, ಕಾರ್ಖಾನೆಗಳಲ್ಲಿ ದುಡಿಮೆ, ಆಫೀಸುಗಳಲ್ಲಿ ದುಡಿಮೆ, ಇತರ ನಾನಾ ದೈಹಿಕ ಶ್ರಮಗಳ ದುಡಿಮೆ, ಹೀಗೆ ದುಡಿಮೆಯ ಶ್ರಮ ವ್ಯತ್ಯಾಸವಿರಬಹುದು. ಹಲವು ಉದ್ಯೋಗದವರು ದೈಹಿಕವಾಗಿ ಹೆಚ್ಚು ದಣಿದರೆ, ಇನ್ನು ಕೆಲವು ಉದ್ಯೋಗದವರು ಮಾನಸಿಕವಾಗಿ ಹೆಚ್ಚು ದಣಿದು ಹಿಂದಿರುಗಬಹುದು. ಇಷ್ಟಲ್ಲದೆ ನಾನಾ ಕಾರಣಗಳಿಂದ ಬೇಸರದ ಮನಸ್ಸಿನೊಂದಿಗೆ ಪತಿ ಮನೆಗೆ ಹಿಂದಿರುಗಬಹುದು.

ಮನೆ ದಣಿದ ದೇಹಕ್ಕೆ, ಮನಕ್ಕೆ ವಿಶ್ರಾಂತಿ ಮತ್ತು ಶಾಂತಿಯನ್ನು ನೀಡುವ ತಾಣ. ತನ್ನ ಆತ್ಮೀಯರಿಂದ ಕೂಡಿದ ಮನೆಯೆ ಒಂದು ವಿಶಿಷ್ಟ ಪ್ರಪಂಚ. ನಗೆ ಅಥವಾ ಕಳೆಗುಂದಿದ ಮುಖ, ಇವೆರಡೂ ಅಂಟು ಜಾಡ್ಯಗಳ ಜಾತಿಗೆ ಸೇರದಂತಹವು. ನಗೆ ಸೂಸುತ್ತ ಮನೆಗೆ ಹಿಂದಿರುಗುವ ಪತಿ, ಮನೆಯ ತುಂಬ ನಗೆಯ ವಾತಾವರಣವನ್ನು ಸೃಷ್ಟಿಸುತ್ತಾನೆ. ಅಂತೆಯೆ ಕಳೆಗುಂದಿದ ಮುಖ, ನಿರುತ್ಸಾಹದ ವಾತಾವರಣವನ್ನು ಸೃಷ್ಟಿಸುತ್ತದೆ. ಆದ್ದರಿಂದ, ಮನೆಯಲ್ಲಿ ನೆಮ್ಮದಿಯ ಹಿತಕರ ವಾತಾವರಣವನ್ನು ಬಯಸುವ ಪತಿ, ತನ್ನ ಎಲ್ಲ ಬೇಸರ, ದಣಿವನ್ನು ಮರೆತು ನಗುಮುಖದೊಂದಿಗೆ ಮನೆಯೊಳಗೆ ಪ್ರವೇಶಿಸಬೇಕು. ಪತಿಯ ಈ ನಗುಮುಖ ಪತ್ನಿಯ ಮುಖದಲ್ಲಿಯೂ ನಗೆಯನ್ನು ಚಿಮ್ಮಿಸಬಲ್ಲದು. ಪತ್ನಿಯ ಮನಸ್ಸಿಗೆ ಹಿತಕೊಡುವಂತಹ ಒಂದೆರಡು ಮಾತುಗಳು, ಮಕ್ಕಳ ಬಗೆಗೆ ವಿಚಾರಣೆ, ಮನೆಯ ವಾತಾವರಣವನ್ನೆ ಬದಲಾಯಿಸಬಲ್ಲವು.

ನಗೆ ಮಿಶ್ರಿತ ಹಿತವಾದ ಮಾತುಗಳೊಂದಿಗೆ ಮನೆಯ ಪ್ರವೇಶಿಸುವ ಪತಿ, ಹೆಚ್ಚು ಕಾಲ ಮನೆಗೆಲಸದಲ್ಲೇ ತೊಡಗಿದ್ದು ಬೇಸರಗೊಂಡಿರುವ ಪತ್ನಿಗೆ ಉತ್ಸಾಹವನ್ನು ತಂದುಕೊಡಬಲ್ಲ; ಮನೆಯಲ್ಲಿ ಉಲ್ಲಾಸದ ಚಿಲುಮೆಯನ್ನು ಚಿಮ್ಮಿಸಬಲ್ಲ.

## ಆತ್ಮೀಯ ವರ್ತನೆ

ಪತ್ನಿಯ ಭಾವನೆ ಮತ್ತು ಅಭಿರುಚಿಗಳೊಂದಿಗೆ ಸ್ಪಂದನ ಗೊಳ್ಳುವ ಪತಿಯ ವರ್ತನೆ, ಪತ್ನಿಯ ಮನಸ್ಸಿನಲ್ಲಿ ಪತಿಯ ಬಗೆಗೆ ಹೆಚ್ಚಿನ ಗೌರವವನ್ನು ಮೂಡಿಸುತ್ತದೆ. ಹೆಚ್ಚು ಶಿಕ್ಷಿತಳಲ್ಲದ ಹಾಗೂ ತನ್ನ ಭಾವನೆ ಮತ್ತು ಅನಿಸಿಕೆಗಳನ್ನು ಸುಂದರವಾದ ರೀತಿಯಲ್ಲಿ ವ್ಯಕ್ತಗೊಳಿಸ ಲಾಗದ ಮಹಿಳೆಯ ವಿಷಯದಲ್ಲಿ ಆಕೆಯ ಪತಿ ಮತ್ತಷ್ಟು ಮೃದು ಹೃದಯಿಯಾಗಬೇಕು. ಆಕೆಯ ಮನಸ್ಸನ್ನು ಅರ್ಥಮಾಡಿಕೊಂಡು, ಭಾವನೆಗಳಿಗೆ ಮನ್ನಣೆ ಕೊಟ್ಟಷ್ಟೂ ಆಕೆ ತನ್ನ ಪತಿಯ ಸೌಖ್ಯಕ್ಕೆ ಎಂತಹ ತ್ಯಾಗಕ್ಕೂ ಸಿದ್ಧಳಾಗುತ್ತಾಳೆ. ಇಡೀ ಸಂಸಾರದ ನೆಮ್ಮದಿಗೆ ಕಾರಣರಾದ ಪತಿ ಮತ್ತು ಪತ್ನಿಯ ನಡುವೆ ಪರಸ್ಪರ ಭಾವನೆಗಳಿಗೆ ಗೌರವ ಕೊಡುವ ಹೊಂದಾಣಿಕೆಯ ವರ್ತನೆ, ಸುಖ ಸಂಸಾರಕ್ಕೆ ಆಧಾರ. ಈ ದಿಸೆಯಲ್ಲಿ ಪತಿಯ ಪಾತ್ರ ಹಿರಿದಾದುದು.

ಒಬ್ಬ ವ್ಯಕ್ತಿ ಉದ್ದಿಮೆಗಾರ, ವಕೀಲ, ರಾಜಕಾರಣಿ, ಅಧಿಕಾರಿ, ವೈದ್ಯ, ಸಾಹಿತಿ ಹೀಗೆ ಯಾವುದೇ ಬಿಡುವು ಸಿಗದ ಉದ್ಯೋಗದಲ್ಲಿರ ಬಹುದು. ಆದರೆ ತನ್ನ ಕುಟುಂಬದವರಿಗೋಸ್ಕರ ಸಾಧ್ಯವಾದ ಮಟ್ಟಿನ ಬಿಡುವಿನ ವೇಳೆಯನ್ನು ಪಡೆಯುವುದು ಅವಶ್ಯಕ. ಯಾವುದೇ ಒಂದು ಉದ್ಯೋಗದಲ್ಲಿ ತೊಡಗಿರುವ ವ್ಯಕ್ತಿ, ಕ್ರಮೇಣ ಒಳ್ಳೆಯ ಹೆಸರನ್ನು ಪಡೆದು ಪ್ರಸಿದ್ಧಿ ಹೊಂದಿ, ಕುಟುಂಬದ ಜನರ ಮನೋ-ಸಾಮಾಜಿಕ ಆವಶ್ಯಕತೆಗಳ ಬಗೆಗೆ ಹೆಚ್ಚು ಆಸಕ್ತಿ ವಹಿಸದೆ, ಹೊರಗಿನ ವ್ಯವಹಾರ ದಲ್ಲಿಯೇ ಹೆಚ್ಚು ತಲ್ಲೀನನಾಗುವ ಸಾಧ್ಯತೆಯೂ ಇದೆ, ಒಬ್ಬ ವ್ಯಕ್ತಿ ಯಾವುದೇ ಒಂದು ಕ್ಷೇತ್ರದಲ್ಲಿ ಎಷ್ಟೇ ಪ್ರಖ್ಯಾತನಾಗಿದ್ದರೂ, ಮನೆ ಯಲ್ಲಿ ತನ್ನ ಪತ್ನಿಗೆ ಪ್ರಥಮತಃ ಆತ ಪತಿ. ಆತ ಎಷ್ಟೇ ಪ್ರಖ್ಯಾತ ನಾಗಿದ್ದರೂ ಆತನ ಸಾಮಿಪ್ಯ, ಪ್ರೀತಿಯ ಮಾತುಕತೆ ಮತ್ತು ಸಂಸಾರದ ವ್ಯವಹಾರಗಳಲ್ಲಿ ಪಾಲ್ಗೊಳ್ಳುವಿಕೆಯನ್ನು ಆತನ ಪತ್ನಿ ಸಹಜವಾಗಿ ನಿರೀಕ್ಷಿಸುತ್ತಾಳೆ. ಅಂತೆಯೆ, ಪತ್ನಿ ಮತ್ತು ಕುಟುಂಬದವರಿಗೆ ಸಂಬಂಧ

ಪಟ್ಟಂತೆ ತನ್ನ ಕರ್ತವ್ಯವನ್ನು ಪತಿ ನಿರ್ವಹಿಸಬೇಕು.

ದಿನದ ಚಟುವಟಿಕೆಗಳ ನಡುವೆ ಸಾಧ್ಯವಾದಷ್ಟು ಬಿಡುವಿನ ವೇಳೆಯನ್ನು ಪತ್ನಿಯೊಂದಿಗೆ ಆತ್ಮೀಯವಾಗಿ ಕಳೆಯಬೇಕು. ಈ ವೇಳೆ ಯಲ್ಲಿ ಆಕೆಯ ಅಭಿಪ್ರಾಯಗಳಿಗೆ ಕಿವಿಗೊಡುವುದು, ಮನೆಯ ಸಮಸ್ಯೆ ಗಳನ್ನು ಚರ್ಚಿಸುವುದು ಮತ್ತು ಸಂಸಾರದ ಯಾವುದೇ ಚಟುವಟಿಕೆ ಅಥವಾ ಹಲವು ಯೋಜನೆಗಳನ್ನು ಕುರಿತು ಚರ್ಚಿಸುವುದು ಆವಶ್ಯಕ. ಮನೆಯ ಎಲ್ಲ ಪ್ರಮುಖ ವ್ಯವಹಾರಗಳಲ್ಲಿ ಆಕೆಯೊಂದಿಗೆ ಚರ್ಚಿಸಿ, ಆಕೆಯ ಅಭಿಪ್ರಾಯಗಳಿಗೆ ಸೂಕ್ತ ಬೆಲೆಯನ್ನು ಕೊಡುವುದರಿಂದ, ಆಕೆಗೆ ಮಾನಸಿಕವಾಗಿ ಅತ್ಯಂತ ಹೆಚ್ಚಿನ ತೃಪ್ತಿಯನ್ನು ತಂದುಕೊಡಬಲ್ಲದು.

ಮನೆಯಾಕೆಯ ಆವಶ್ಯಕತೆಯನ್ನು ಕಡೆಗಾಣಿಸಿ, ಪತಿ ತಾನು ಮಾತ್ರ ತನ್ನ ಬೇಸರವನ್ನು ಕಳೆದುಕೊಂಡು ಮನೆಗೆ ಹಿಂದಿರುಗಿದಾಗ ಸಹಜವಾಗಿ ಮನೆಯಲ್ಲಿಯೇ ಇದ್ದು ಬೇಸರಗೊಂಡಿರುವ ಪತ್ನಿಯನ್ನು ಕಾಣಬೇಕಾಗುತ್ತದೆ. ಹೊರಗಡೆ ಹೆಚ್ಚು ಓಡಾಡುವ ಪತಿಗಿಂತ, ದಿನವಿಡೀ ಗಾಣದೆತ್ತಿನಂತೆ ಗೃಹಕೃತ್ಯದಲ್ಲೇ ತೊಡಗಿರುವ ಪತ್ನಿಗೆ ಮನರಂಜನೆಯ ಆವಶ್ಯಕತೆ ಹೆಚ್ಚು.

ಮನೆಯ ಚಟುವಟಿಕೆಗಳಿಂದ ಸ್ವಲ್ಪ ಹೊತ್ತಿನ ಬಿಡುವು, ದೈನಂದಿನ ಇತರ ಚಟುವಟಿಕೆಗಳಲ್ಲಿ ಇಮ್ಮಡಿಗೊಂಡ ಉತ್ಸಾಹದಿಂದ ಪಾಲ್ಗೊಳ್ಳಲು ಸಹಾಯವಾಗುತ್ತದೆ. ಗಾಳಿಗ ಹೊರಗಡೆ ಅಡ್ಡಾಡಿ ಬಂದರೂ ಸಾಕು ಹೊಸ ಅನುಭವವಾಗುತ್ತದೆ. ಪತ್ನಿಗೆ ಇಂತಹ ಅವ ಕಾಶವನ್ನು ಕಲ್ಪಿಸಿಕೊಡಬಹುದಲ್ಲವೆ? ಪತಿಯೊಡನೆ ಹೊರಗಡೆ ಅಡ್ಡಾಡಿ ಬರಲು ಪತ್ನಿ ಸಹಜವಾಗಿಯೆ ಇಚ್ಛೆಪಡಬಹುದು. ಸಾಧ್ಯವಾದಾಗಲೆಲ್ಲ ಇಂತಹ ಸಣ್ಣ ಪುಟ್ಟ ಆವಶ್ಯಕತೆಗಳನ್ನು ಪೂರೈಸುವುದು ಒಳಿತು. ಪತಿ ಮತ್ತು ಪತ್ನಿ ಹೊರಗಡೆ ಓಡಾಡಿ ಬರುವುದು ನಗರಗಳಲ್ಲಿ ಹೊಸದೇನಲ್ಲ. ಆದರೆ ಹಳ್ಳಿಗಳಲ್ಲಿ ಪರಿಸ್ಥಿತಿ ಬದಲಾವಣೆ ಹೊಂದಿಲ್ಲದಿರುವುದು ವಿಷಾದ ನೀಯ. ಅದೇ ರೀತಿ ಮನರಂಜನಾ ಸ್ಥಳಗಳಿಗೆ ಆಗಾಗ್ಗೆ ಹೋಗಿ ಬರು

ವುದರಿಂದ, ಬೇಸರದ ಮನಸ್ಸಿಗೆ ಹಿತವನ್ನು ತಂದುಕೊಡುತ್ತದೆ.

ಸಣ್ಣ ಪುಟ್ಟ ಕಾರಣಗಳಿಗೆಲ್ಲ ಸಿಡುಕುವುದು, ದೋಷಗಳನ್ನು ಹುಡುಕಿ ಅದನ್ನೇ ಪದೇ ಪದೇ ಎತ್ತಿ ಆಡುವುದು, ಎಲ್ಲ ವಿಷಯಗಳಿಗೂ ಹಂಗಿಸುವುದು ಮತ್ತು ಇತರರ ಮುಂದೆ ಅಪಮಾನಗೊಳಿಸುವಂತಹ ವರ್ತನೆ ಅಥವಾ ಮಾತುಗಳು, ಪತ್ನಿಯಲ್ಲಿ ಅತ್ಯಂತ ಬೇಸರವನ್ನು ಮೂಡಿಸುತ್ತವೆ. ಆಕೆ ಮಾಡುವ ಅಡಿಗೆಯ ರುಚಿಯಿಂದ ಹಿಡಿದು ಹೊರಗಡೆ ಇತರರೊಡನೆ ಆಕೆಯ ಮಾತುಕತೆಗಳವರೆಗೆ ಹಲವಾರು ವಿಷಯ ಗಳಲ್ಲಿ ದೋಷಗಳನ್ನು ಕಂಡುಹಿಡಿಯಬಹುದು. ಆದರೆ ದೋಷ ಹುಡುಕುವುದೇ ಒಂದು ಉದ್ಯೋಗವಾಗಬಾರದಲ್ಲವೆ? ಪತ್ನಿಯ ಭಾವನೆ ಮತ್ತು ಮನಸ್ಸಿಗೆ ನೋವಾಗುವಂತಹ ಕುಟುಕು ಮಾತು ಮತ್ತು ವರ್ತನೆ ಯನ್ನು ನಿಲ್ಲಿಸಬೇಕು. ಲೋಪ ದೋಷಗಳನ್ನು ತಿದ್ದುವ ಉದ್ದೇಶವಿದ್ದಲ್ಲಿ, ಆಕೆಯ ಭಾವನೆಗಳಿಗೆ ನೋವಾಗದಂತೆ, ತಾವಿಬ್ಬರೇ ಇರುವ ಸಂದರ್ಭ ಗಳಲ್ಲಿ ಸೂಕ್ತ ತಿಳಿವಳಿಕೆಯನ್ನು ಕೊಡಬಹುದು. ಅಭಿಮಾನದ ಮೆಚ್ಚು ಗೆಯ ಮಾತುಗಳು ಪತ್ನಿಯಲ್ಲಿ ಅತ್ಯಂತ ತೃಪ್ತಿಯ ಮಾನಸಿಕ ಸ್ಥಿತಿಯನ್ನು ಉಂಟುಮಾಡಬಲ್ಲದು. ಆದ್ದರಿಂದ ಮೆಚ್ಚುಗೆಯನ್ನು ವ್ಯಕ್ತಪಡಿಸಬಹು ದಾದಂತಹ ಸಂದರ್ಭಗಳಲ್ಲಿ ಹಾಗೆ ಮಾಡಲು ಹಿಂಜರಿಯುವುದು ಬೇಡ.

## ಅನವಶ್ಯಕ ಹಸ್ತಕ್ಷೇಪ

ಗೃಹಕೃತ್ಯದ ಹಲವು ಕ್ಷೇತ್ರಗಳು ಪ್ರಮುಖವಾಗಿ ಮಹಿಳಾ ಕ್ಷೇತ್ರಗಳೆನಿಸುತ್ತವೆ. ಇಂತಹ ಸಂದರ್ಭಗಳಲ್ಲಿ ಪತಿಯ ಅನವಶ್ಯಕ ಹಸ್ತ ಕ್ಷೇಪ, ಪತ್ನಿಯ ಸ್ವಾತಂತ್ರವನ್ನು ಮೊಟಕುಗೊಳಿಸಿದಂತಾಗುತ್ತದೆ. ಅಂತೆಯೆ ಈ ವ್ಯವಹಾರಗಳಲ್ಲಿ ಮಹಿಳೆಗೆ ಹೆಚ್ಚಿನ ಸ್ವಾತಂತ್ರವನ್ನು ಕೊಡುವ ಬಗೆಗೆ ಚಿಂತಿಸಬಹುದು.

ತನ್ನ ಮನೆ ಮತ್ತು ಅದರ ಅಲಂಕಾರದ ಬಗೆಗೆ ಪ್ರತಿ ಮಹಿಳೆಯೂ ತನ್ನದೇ ಆದ ಕಲ್ಪನೆಯನ್ನು ಹೊಂದಿರುತ್ತಾಳೆ. ಸಾಂಸ್ಕೃತಿಕ

ಮತ್ತು ಆರ್ಥಿಕ ಹಿನ್ನೆಲೆಗೆ ಅನುಗುಣವಾಗಿ ಪ್ರತಿ ಸ್ತ್ರೀಯೂ ತನ್ನ ಮನೆಯನ್ನು ಹೇಗೆ ಸಿಂಗರಿಸಬೇಕು ಎನ್ನುವುದನ್ನು ನಿರ್ಧರಿಸಿ ಅದರಂತೆಯೆ ಗೃಹಾಲಂಕಾರದಲ್ಲಿ ತೊಡಗುತ್ತಾಳೆ. ಅನೇಕ ಸಂದರ್ಭಗಳಲ್ಲಿ ಗೃಹದ ಅಂದಚೆಂದದ ವಿಷಯದಲ್ಲಿ ಪತ್ನಿಯ ಅಭಿರುಚಿ, ಪತಿಯ ಅಭಿರುಚಿಗಿಂತ ಭಿನ್ನವಾಗಿರಬಹುದು. ಆದರೆ ಈ ವಿಷಯದಲ್ಲಿ ಪತ್ನಿಗೆ ಹೆಚ್ಚಿನ ಸ್ವಾತಂತ್ರ್ಯವನ್ನು ಕೊಡುವುದು ಒಳಿತು. ಮನೆಯ ಅಂದಚಂದವನ್ನು ಕಾಪಾಡುವಲ್ಲಿ ಮಹಿಳೆ ಹೆಚ್ಚಿನ ಆಸಕ್ತಿಯನ್ನು ವಹಿಸುತ್ತಾಳೆ ಮತ್ತು ಆನಂದವನ್ನು ಪಡೆಯುತ್ತಾಳೆ. ಮನೆಯ ಅಲಂಕಾರ ಅತ್ಯಂತ ಆಕ್ಷೇಪಾರ್ಹ ಹಾಗೂ ಕೆಟ್ಟ ರೀತಿಯಲ್ಲಿದ್ದರೆ ಮಾತ್ರ ಪತಿ ಮಧ್ಯೆ ಪ್ರವೇಶಿಸಬಹುದೆನಿಸುತ್ತದೆ. ಅಲ್ಲದೆ ತೀರ ಅವಶ್ಯವೆನಿಸಿದರೆ, ಪತ್ನಿಯ ಭಾವನೆಗೆ ನೋವಾಗದಂತೆ, ಸಲಹೆಯ ರೂಪದಲ್ಲಿ ಮನೆಯ ಅಲಂಕಾರದಲ್ಲಿಯೂ ತಿಳಿವಳಿಕೆಯನ್ನು ನೀಡಬಹುದು.

ಉಡುಪು ಮತ್ತು ಅಲಂಕಾರದ ವಿಷಯದಲ್ಲಿಯೂ ಸ್ವಾತಂತ್ರ್ಯವನ್ನು ಕೊಡುವ ಬಗೆಗೆ ಯೋಚಿಸಬಹುದು. ಮಹಿಳೆಯ ಅಲಂಕಾರ ಹಾಗೂ ಬಟ್ಟೆಗಳನ್ನು ತೊಡುವ ರೀತಿ ಪುರುಷರ, ಅಂತೆಯೆ ಪತಿಯ ತೀವ್ರ ಟೀಕೆಗೆ ಒಳಗಾಗುವಂತಹ ವಿಷಯಗಳು. ಒಂದು ಕುಟುಂಬದ ಸ್ಥಿತಿಗತಿ ಮತ್ತು ಘನತೆಯ ಮಿತಿಯೊಳಗೆ ಪತ್ನಿ ತನ್ನ ಅಭಿರುಚಿಯನ್ನು ಅಭಿವ್ಯಕ್ತಗೊಳಿಸುವ ಸ್ವಾತಂತ್ರ್ಯ ಅವಶ್ಯಕ. ಅಂದರೆ ಸಣ್ಣ ವಿಷಯಗಳಿಗೆಲ್ಲ ಕುಟುಕು ಮಾತಾಡುವುದು ಹಾಗೂ ತನ್ನ ಇಷ್ಟದಂತೆಯೇ ಎಲ್ಲವೂ ಆಗಬೇಕೆಂಬ ಪಟ್ಟು ಹಿಡಿಯದೆ, ತೀರ ಅತಿಯೆನಿಸುವ ಸಂದರ್ಭಗಳು ಮತ್ತು ತಮ್ಮ ಕುಟುಂಬದ ಘನತೆಗೆ ಮೀರಿದ್ದು ಎನಿಸುವಂತಹ ವಿಷಯಗಳಲ್ಲಿ ಪತಿ ಮಧ್ಯೆ ಪ್ರವೇಶಿಸಿ, ಅಭಿಪ್ರಾಯದ ತೀವ್ರ ಘರ್ಷಣೆಗೆ ಆಸ್ಪದ ಕೊಡದಂತೆ ಪರಿಸ್ಥಿತಿಯನ್ನು ಹತೋಟಿಯಲ್ಲಿಟ್ಟುಕೊಳ್ಳಬಹುದು. ತಿಳಿವಳಿಕೆ, ಅಭಿಪ್ರಾಯ ವಿನಿಮಯ ಮತ್ತು ಪ್ರೀತಿಯಿಂದ ಯಾವ ವಿಷಯದಲ್ಲಿಯೂ ಬದಲಾವಣೆಯನ್ನು ತರಲು ಸಾಧ್ಯವೆನಿಸುತ್ತದೆ.

ಮನೆಗೆ ಬೇಕಾದ ಸಾಮಗ್ರಿಗಳ ಖರೀದಿಯ ವಿಷಯ, ಮಹಿಳೆಯ ಮತ್ತೊಂದು ಕ್ಷೇತ್ರ. ಆಹಾರ ಪದಾರ್ಥಗಳಾಗಲಿ ಅಥವಾ ತರಕಾರಿಯಾಗಲಿ, ಇವುಗಳ ನಿರ್ಧಾರವನ್ನು ಪತ್ನಿಗೇ ಬಿಡುವುದರಲ್ಲಿ ಇಬ್ಬರಿಗೂ ಕ್ಷೇಮವಿದೆ. ಈ ಸ್ವಾತಂತ್ರ್ಯದಿಂದ, ಮನೆಯನ್ನು ನಡೆಸುವ ಜವಾಬ್ದಾರಿ ತನ್ನ ಮೇಲಿದೆ ಎನ್ನುವ ಮಾನಸಿಕ ತೃಪ್ತಿ ಪತ್ನಿಗಾದರೆ, ಮನೆಯ ದಿನನಿತ್ಯದ ಸಣ್ಣ ಪುಟ್ಟ ಖರೀದಿಗಳಿಗೆಲ್ಲ ತಲೆಕೆಡಿಸಿಕೊಳ್ಳದೆ ಇತರ ಮುಖ್ಯ ವಿಷಯಗಳ ಬಗೆಗೆ ಗಮನ ಹರಿಸಬಹುದಾದ ನೆಮ್ಮದಿ ಪತಿಗಾಗುತ್ತದೆ. ಅಂದ ಮಾತ್ರಕ್ಕೆ ಅವಶ್ಯವೆನಿಸಿದಾಗ ಸಲಹೆಗಳನ್ನು ಕೊಡಬಾರದೆಂದು ಅರ್ಥವಲ್ಲ. ಮಾರುಕಟ್ಟೆಗೆ ಪತ್ನಿ ಸ್ವತಃ ಹೋಗಿ ತರಕಾರಿ ಇತ್ಯಾದಿಗಳನ್ನು ಖರೀದಿಸುವ ಸ್ವಾತಂತ್ರ್ಯವನ್ನು ಕೊಡಬೇಕು ; ಸಾಧ್ಯವಾದ ಸಂದರ್ಭಗಳಲ್ಲಿ ಪತ್ನಿಯೊಂದಿಗೆ ಪತಿಯೂ ಇಂತಹ ವ್ಯಾಪಾರಕ್ಕೆ ಹೋಗುತ್ತಿರಬೇಕು. ಒಟ್ಟಿನಲ್ಲಿ 'ನಾನು ತಂದು ಹಾಕಿದ್ದನ್ನು ನೀನು ಬೇಯಿಸಿ ಹಾಕು' ಎನ್ನುವ ಧೋರಣೆ ಸಲ್ಲದು.

## "ಮನೆಯಾಕೆ ನಕ್ಕಾಗ ......."

ಗೃಹಕೃತ್ಯದ ಇಂತಹ ಅನೇಕ ವಿಷಯಗಳಲ್ಲಿ ಪತ್ನಿಗೆ ಕೊಡುವ ಸ್ವಾತಂತ್ರ್ಯ ಹಾಗೂ ಪತಿಯ ಅನವಶ್ಯಕ ಹಸ್ತಕ್ಷೇಪವಿಲ್ಲದಿರುವಿಕೆ, ಪತ್ನಿಗೆ ಅತ್ಯಂತ ಹೆಚ್ಚಿನ ತೃಪ್ತಿಯನ್ನು ತಂದುಕೊಡಬಲ್ಲದು ; ಬೇಸರ ತರಿಸುವ ಮನೆಯ ಕೆಲಸಗಳ ನಡುವೆಯೂ ಉತ್ಸಾಹವನ್ನು ಉಂಟುಮಾಡಬಲ್ಲದು. ತನ್ನ ಪತಿ, ತನ್ನ ಮಕ್ಕಳು ಮತ್ತು ತನ್ನ ಸಂಸಾರ ಎನ್ನುವ ಭಾವನೆ, ಸುಖ ಸಂಸಾರಕ್ಕೋಸ್ಕರ ಎಂತಹ ಕಷ್ಟವನ್ನೂ ಸಹಿಸುವ ತಾಳ್ಮೆಯನ್ನು ತಂದುಕೊಡಬಲ್ಲದು; ಅವಶ್ಯವೆನಿಸಿದರೆ ತನ್ನ ಆವಶ್ಯಕತೆ ಮತ್ತು ಸುಖಗಳ ತ್ಯಾಗಕ್ಕೂ ಆಕೆಯನ್ನು ಸಿದ್ಧಗೊಳಿಸಬಲ್ಲದು.

ಒಂದು ಸಂಸಾರದ ಎರಡು ಚಕ್ರಗಳು, ಪತಿ ಮತ್ತು ಪತ್ನಿ. ಅವುಗಳ ಸಮತೋಲನ ಚಲನೆ ಸಂಸಾರದ ಸರಾಗ ಮುಂದುವರೆಯುವಿಕೆಗೆ ಆವಶ್ಯಕ. ತನ್ನ ಸಂಸಾರದ ಸುಖಕ್ಕೋಸ್ಕರ ಪತ್ನಿಯಿಂದ ತ್ಯಾಗ, ತಾಳ್ಮೆ, ಹೊಂದಾಣಿಕೆ, ಕಷ್ಟ ಸಹಿಷ್ಣುತೆ, ಸಚ್ಚಾರಿತ್ರ್ಯ ಇತ್ಯಾದಿಗಳನ್ನು ನಿರೀಕ್ಷಿಸು